# ಕೊಡಗು ಸಂಗಾತಿ

ಸೆಪ್ಟೆಂಬರ್ 1 ರಿಂದ 15, 2000 ಪಾಕ್ಷಿಕ ಪತ್ರಿಕೆ (ಸೋಣ 16-30 )

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

KA/SK/MYS-88 ಸಂಪುಟ : 4 ಸಂಚಿಕೆ : 17 ಪುಟಗಳು : 24 ಬೆಲೆ ರೂ. : 6-00

Miles 10 20 30 40 50 60 70

K.Ms. 10 20 30 40 50 60 70 80 90 100 110 120

AMMALS

| | | | | | | | | | | |
|---|---|---|---|---|---|---|---|---|---|---|
| pig | sheep | setter | rhinoceros | rabbit | race-horse | hare | roe-buck | gazelle | | cheetah |
| camel | kangaroo | elephant | wolf | buffalo | zebra | fox | lion | antelope | | |
| | | | giraffe | | greyhound | deer | | | | |

ಲೇಖನ : ಒಳಪುಟಗಳಲ್ಲಿ

## ಎಲ್ಲರೂ ಓಡುವವರೆ, ಓಟದಲ್ಲಿ ಪ್ರಥಮ ಸ್ಥಾನ ಯಾರಿಗಿರಬಹುದು?

ಕನ್ನಡ ನಾಡಿನ ಸಮಸ್ತ ಓದುಗರಿಗೆ, ಕೈಲು ಮುಹೂರ್ತ ಹಬ್ಬದ ಶುಭಾಶಯಗಳು

## ಚಂದದಾರರಲ್ಲಿ ಸವಿನಯ ವಿನಂತಿ

ಕೊಡಗು ಸಂಗಾತಿಯ ಓದುಗರಾಗಿ, ಚಂದದಾರರಾಗಿ ಪತ್ರಿಕೆಯನ್ನು ನವೀಕರಿಸದೆ ಇರುವ ಸದಸ್ಯರು ಶೀಘ್ರದಲ್ಲಿ ಹಣ ಪಾವತಿಸುವಂತೆ ವಿನಂತಿ. ಹಣವನ್ನು ನೇರವಾಗಿ ಮೈಸೂರಿನ ಶಾಖೆಗೆ ಪಾವತಿಸುವುದು. ಮಡಿಕೇರಿ ಶಾಖೆಯಲ್ಲಿಯೂ ನೀಡಬಹುದು. ಮತ್ತು ಮೈಸೂರಿನ ಸ್ಥಳೀಯ ಚೆಕ್‌ಗಳನ್ನು ಸ್ವೀಕರಿಸುತ್ತೇವೆ. ಉಳಿದಂತೆ ನಗದು/ಡಿಡಿ/M.O. ಮೂಲಕ ಸ್ವೀಕರಿಸಲಾಗುವುದು. ಸಂಗಾತಿ ಪತ್ರಿಕೆಯ ವಸೂಲಾತಿ ವಿಭಿನ್ನ ರೀತಿಯ ಪೋಸ್ಟಲ್ ಸೇವೆಯಾಗಿದೆ. ಮೂಲೆ ಮೂಲೆಗಳಲ್ಲಿರುವ ಓದುಗರ ಸಮೀಪ ಬರಲು ಸಾಧ್ಯ ಆಗುತ್ತಿಲ್ಲವಾದ್ದರಿಂದ ಸಹೃದಯ ಓದುಗರು ಕೃಪೆತೋರಿ ಪಾಕ್ಷಿಕವನ್ನು ನಿಗದಿತ ಸಮಯದೊಳಗೆ ನವೀಕರಿಸಿ ಸಹಕರಿಸುವಂತೆ ನಮ್ಮ ವಿನಮ್ರ ಮನವಿಯಾಗಿದೆ. ಪತ್ರಿಕೆಯ ಹೊರಕವಚದಲ್ಲಿ ವಿಳಾಸದ ಮೇಲ್ಭಾಗ ನವೀಕರಿಸುವ ದಿನಾಂಕ ಮುದ್ರಿತವಾಗುತ್ತಿದೆ. ಪತ್ರಿಕೆಯು ಎಂತಹ ಕಷ್ಟಕಾರ್ಪಣ್ಯ ಬಂದರೂ ಎದೆಗುಂದದೆ ಮುನ್ನಡೆಯುತ್ತಿರುವುದಕ್ಕೆ ತಮ್ಮ ಪ್ರೀತಿ, ವಿಶ್ವಾಸ ಸಹಕಾರವೇ ಅಗತ್ಯವಾದ ಕಾರಣವಾಗಿದೆ. ಪತ್ರಿಕೆಯನ್ನು ಆಗಿಂದಾಗ್ಯೆ ನವೀಕರಿಸಕೊಳ್ಳದಿರುವುದರಿಂದ ಅರ್ಥಿಕ ಪರಿಸ್ಥಿತಿಯನ್ನು ಎದುರಿಸುತ್ತಿದೆ. ನೆನಪಿರಲಿ.

– ಸಂಪಾದಕಿ.

## ಕೆಲಸಗಳ ಅವಕಾಶಗಳು

ಪಂಜಾಬ್ ನ್ಯಾಷನಲ್ ಬ್ಯಾಂಕಿನಲ್ಲಿ ಆಫೀರ್ ಕೇಡರ್‌ನಲ್ಲಿ 75 ಪ್ರೊಬೇಶನರಿ ಆಫೀಸರ್‌ಗಳೂ ಸೇರಿದಂತೆ 144 ಆಫೀಸರ್ ಹುದ್ದೆಗಳಿಗೆ ದೆಹಲಿಯ ಬ್ಯಾಂಕಿಂಗ್ ಸರ್ವೀಸ್ ರಿಕ್ರೂಟ್‌ಮೆಂಟ್ ಬೋರ್ಡ್ ಅರ್ಜಿಗಳನ್ನು ಆಹ್ವಾನಿಸಿದೆ. ಅರ್ಜಿಸಲ್ಲಿಸಲು ಕೊನೆಯ ದಿನಾಂಕ 31-8-2000.

* * *

### ಬ್ಯಾಂಕ್ ಆಫ್ ಪಂಜಾಬ್‌ನಲ್ಲಿ ಎಕ್ಸಿಕ್ಯೂಟಿವ್ ಹುದ್ದೆಗಳು

ಪದವೀಧರ ಅರ್ಹರಿಂದ ಅರ್ಜಿಗಳನ್ನು ಆಹ್ವಾನಿಸಿದೆ. ಹುದ್ದೆಗಳು, ಬೆಂಗಳೂರು, ಹೈದರಾಬ್, ಚನ್ನೈ, ಮುಂಬೈ, ಕಲ್ಕತ್ತಾ, ಜೈಪುರ್ ಹಾಗೂ ಉತ್ತರ ಭಾರತದ ಇತರ ನಗರಗಳಲ್ಲಿ ಇವೆ. ಒಳ್ಳೆಯ ಅಕಾಡೆಮಿಕ್ ರೆಕಾರ್ಡ್‌ನೊಂದಿಗೆ ಖಾಸಗಿ ಸೆಕ್ಟರ್ ಬ್ಯಾಂಕ್‌ನಲ್ಲಿ 1-3 ವರ್ಷಗಳ ಅನುಭವ ಹೊಂದಿರುವ 25ರಿಂದ 30 ವರ್ಷದ ಉತ್ಸಾಹಿ ಅಭ್ಯರ್ಥಿಗಳು ಇತ್ತೀಚಿನ ಪಾಸ್ ಪೋರ್ಟ್ ಸೈಜಿನ ಭಾವಚಿತ್ರ ಮತ್ತು ವಿವರಗಳೊಂದಿಗೆ ವೈಸ್ ಪ್ರೆಸಿಡೆಂಟ್, ಬ್ಯಾಂಕ್ ಆಫ್ ಪಂಜಾಬ್ ಲಿಮಿಟೆಡ್ SCO-46-47, ಬ್ಯಾಂಕ್, Square, sector 9-D, ಚಂಡಿಘರ್ ಇಲ್ಲಿಗೆ ರವಾನಿಸುವಂತೆ ಕೋರಲಾಗಿದೆ.

ಲಕ್ನೋ BSRBಯಲ್ಲಿ 412 ಕ್ಲರ್ಕ್ ಹುದ್ದೆಗಳು ಕೊನೆಯ ದಿನಾಂಕ 5-9-2000.



## ಮೈಸೂರು ನಗರದ ಸಂಗಾತಿ ಓದುಗರಲ್ಲಿ ವಿನಂತಿ

ಸಂಗಾತಿ ಪತ್ರಿಕೆ ಸುಲಭ ಸೂಚಿ ನಿರ್ವಹಣೆಗಾಗಿ ಸನ್ಮಾನ್ಯ ಓದುಗರು ತಮ್ಮ ದೂರವಾಣಿ ಸಂಖ್ಯೆಯನ್ನು ಮತ್ತು ವಿಳಾಸವನ್ನು ಮರೆಯದೆ ಸಂಗಾತಿಗೆ ತಿಳಿಸುವಂತೆ ಈ ಮೂಲಕ ಪ್ರಾರ್ಥಿಸುತ್ತೇವೆ.

ವ್ಯವಸ್ಥಾಪಕ, ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ

ಮೈಸೂರು. ಪೋನ್ - 516771



# 2000, ಆಗಸ್ಟ್ 16 ರಿಂದ 31 ರ ತನಕ

## ಒಳನೋಟ






| | |
|---|---|
|  ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ,** 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. ಫೋನ್ : **0821/516771** |
|  ಮಡಿಕೇರಿಯಲ್ಲಿ ಸಂಗಾತಿ ಕಛೇರಿ | ಬೈತಡ್ಕ ಜಾನಕಿ ಬೆಳ್ಯಪ್ಪ,,ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, ಫೋನ್ : **08272/28047** |
|  ಚಿಹ್ನೆ, ಹಸೆಮಣೆ/ಶುಭಾಶಯ ಕಾರ್ಡ್ಸ್ ಕ್ಯಾಸೆಟ್/ಕೀ ಚೈನ್ ಲಭ್ಯ | ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ ಫೋನ್ : 08272/29620 |
|  ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/73370 |
|  ಬೆಂಗಳೂರು ಮಹಾನಗರ | ಅಮ್ಮಾಜೀರ ಪೊನ್ನಪ್ಪ, 20, 1ನೇ ಮೈನ್, 4ನೇ ಕ್ರಾಸ್, ಸಾಕಮ್ಮ ಗಾರ್ಡನ್, ಬಸವನಗುಡಿ, ಬೆಂಗಳೂರು - 04, ಫೋನ್ :080/6342822 |
|  ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19,ಫೋನ್ : 080/6500946 |

 ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **6** ರೂ., ಅರ್ಧ ವಾರ್ಷಿಕ -**75** ರೂ., ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಗೌಡರ ಪದ್ಧತಿಗಳ ನಿರ್ವಹಣೆ

ಹಿಂದಿನ ಕಾಲದಲ್ಲಿ ಕೊಡಗಿನಲ್ಲಿ ಗ್ರಾಮಕ್ಕೊಬ್ಬ ಊರು ಗೌಡ, ಒಬ್ಬ ಬುದ್ಧಿವಂತ ಎಂಬದಾಗಿ ಶೃಂಗೇರಿ ಜಗದ್ಗುರುಗಳ ಆದೇಶದ ಮೇರೆಗೆ ವ್ಯವಸ್ಥೆ ಇತ್ತು. ಕೊಡಗು ರಾಜರೂ ಸಹ ಈ ರೀತಿಯ ವ್ಯವಸ್ಥೆಗೆ ಮನ್ನಣೆ ಕೊಟ್ಟಿದ್ದರು. ಗ್ರಾಮಗಳಲ್ಲಿ ಜಾತಿ ಪದ್ಧತಿಗಳ ಮೇಲ್ವಿಚಾರಣೆಯನ್ನು ಗ್ರಾಮ ಗೌಡರು ನಿರ್ವಹಿಸುತ್ತಿದ್ದರು. ಗ್ರಾಮಗಳಲ್ಲಿ ಇದ್ದ ತಕರಾರುಗಳನ್ನು ಗ್ರಾಮ ಗೌಡರ ನೇತೃತ್ವದಲ್ಲಿ ಪಂಚಾಯಿತಿ ಮುಖಾಂತರ ತೀರ್ಮಾನವಾಗುತ್ತಿತ್ತು. ಗ್ರಾಮದಲ್ಲಿ ತೀರ್ಮಾನವಾಗದಿದ್ದಲ್ಲಿ ಕಟ್ಟೆಮನೆ ಗೌಡರಿಗೆ ಮೇಲ್ಮನವಿ ಹೋಗುತ್ತಿತ್ತು. ಕಟ್ಟೆಮನೆ ಗೌಡರಿಂದಲೂ ತೀರ್ಮಾನವಾಗದ ಖಟ್ಲೆ ರಾಜರ ಅಸ್ಥಾನದಲ್ಲಿದ್ದ ದಿವಾನರಿಗೆ ಕೊಟ್ಟು ಅಲ್ಲಿ ಅಂತಿಮ ತೀರ್ಮಾನವಾಗುತ್ತಿತ್ತು. ಆದ್ದರಿಂದ ಗೌಡರ ಪದ್ಧತಿಯಲ್ಲಿ ಅದರ ಆಚರಣೆ ಕ್ರಮಬದ್ಧವಾಗಿ ನಡೆಯುತ್ತಿತ್ತು.

ಆದರೆ ಕೊಡಗು ಬ್ರಿಟಿಷರ ವಶವಾದ ನಂತರ ಈ ರೀತಿಯ ವ್ಯವಸ್ಥೆಗಳು ಹಾಳಾಗಿ ಎಲ್ಲಿಯೂ ಯಾವ ರೀತಿಯ ಹಿಡುಕಟ್ಟು ಇಲ್ಲದೆ ಗೌಡರ ಪದ್ಧತಿಗಳಿಗೆ ತಿಲಾಂಜಲಿ ಬಿಟ್ಟಂತಾಗಿದೆ. ಕುಟುಂಬದಲ್ಲಾಗಲೀ, ಊರಿನಲ್ಲಾಗಲೀ ಪ್ರತಿಯೊಬ್ಬನು ಯಜಮಾನನಾಗಿದ್ದಾನೆ. ಒಬ್ಬರ ಮಾತು ಇನ್ನೊಬ್ಬರು ಕೇಳುವ ಪರಿಸ್ಥಿತಿಯಲ್ಲಿಲ್ಲ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗ್ರಾಮ ಗೌಡರ ವ್ಯವಸ್ಥೆ ಸ್ವಲ್ಪ ಮಟ್ಟಿಗಾದರೂ ಇದೆ.

ಅಂದ ಹಾಗೆ ಕೊಡಗಿನ ಪ್ರತಿ ಗ್ರಾಮಗಳಲ್ಲೂ ಗೌಡ ಸಮಾಜ ಸ್ಥಾಪನೆಯಾಗಿ ಗೌಡರ ಸಂಸ್ಕೃತಿಯನ್ನು ಕಾಪಾಡಲು ತಕ್ಕ ಏರ್ಪಾಡು ಅತೀ ಅವಶ್ಯಕವಾಗಿದೆ ಎಂದು ಸಂಗಾತಿಯ ಅಭಿಪ್ರಾಯ. ಗೌಡ ಸಮಾಜವೆಂದರೆ ಸಮಾಜದ ಕಟ್ಟಡ ಆಗಲೇ ಬೇಕೆಂದಿಲ್ಲ, ಗ್ರಾಮದ ಮಂದಿ ದೇವಸ್ಥಾನ ಶಾಲೆಗಳಲ್ಲೂ ಸಮಾಜದ ಸಭೆಗಳನ್ನು ಏರ್ಪಡಿಸಿ ಸಂಸ್ಕೃತಿಯನ್ನು ಕಾಪಾಡುವ ಬಗ್ಗೆ ಚರ್ಚಿಸಿ ತೀರ್ಮಾನ ಕೈಗೊಳ್ಳಬಹುದು.

## ಉರಿಬಿಸಿಲಿನ ವಾತಾವರಣದಲ್ಲಿ ಮುದ ನೀಡಿದ ಕೆಸರುಗದ್ದೆ ಕ್ರೀಡೋತ್ಸವ

ಛಾಯಾ ಚಿತ್ರಲೇಖನ
ಅಂಚೆಮನೆ ಸುಧಿ

ದ್ವಿತೀಯ ಸ್ಥಾನ ಪಡೆದ ಕಾಂತೂರು ತಂಡದ ಮಹಿಳಾ ಸದಸ್ಯರು



ಪುರುಷರ ಹಗ್ಗ ಜಗ್ಗಾಟದೊಂದು ನೋಟ



21-7-2000ರಂದು ಮಡಿಕೇರಿ-ವೀರಾಜಪೇಟೆ ರಸ್ತೆಯ ಮುತ್ತಾರ್ಮುಡಿಯಲ್ಲಿ ಸಂಭ್ರಮದ ವಾತಾವರಣ. ಕೊಡಗು-ಗೌಡ ಸಾಂಸ್ಕೃತಿಕ ಅಕಾಡೆಮಿ ವತಿಯಂದ ಇದೇ ಪ್ರಥಮ ಬಾರಿಗೆ ಗೌಡ ಜನಾಂಗದವರಿಗಾಗಿ ಕೆಸರುಗದ್ದೆ ಕ್ರೀಡೋತ್ಸವವು ಉರಿಬಿಸಿಲಿನ ವಾತಾವರಣವನ್ನು ತಣಿಸಿ, ಮನಸ್ಸಿಗೆ ಮುದ ನೀಡುವಲ್ಲಿ ಯಶಸ್ವಿಯಾಯಿತು.

ಪೂರ್ವಾಹ್ನ ೧೧ ಗಂಟೆಗೆ ಸರಿಯಾಗಿ ಮುತ್ತಾರ್ಮುಡಿಯ ದೇರಜೆ ಬೋಪಣ್ಣ ಹಾಗೂ ಬಿದ್ದಪ್ಪ ಅವರ ಗದ್ದೆಯಲ್ಲಿ ಕ್ರೀಡೋತ್ಸವವನ್ನು ನಿವೃತ್ತ ಡಿವೈಎಸ್‌ಪಿ ಕೂಡಕಂಡಿ ಸೋಮಣ್ಣ ಅವರು ವಿಧ್ಯುಕ್ತವಾಗಿ ಉದ್ಘಾಟಿಸಿದರು. ಅಬಾಲ ವೃದ್ಧರಾದಿಯಾಗಿ, ಮಹಿಳೆಯರೂ ತಮ್ಮ ಸಂಕೋಚ, ನಾಚಿಕೆಗಳನ್ನು ತೊರೆದು ಕೆಸರಿನಲ್ಲಿ ಓಡಿದರು. ಹಗ್ಗವನ್ನು ಇನ್ನಿಲ್ಲದ ಉತ್ಸಾಹದಲ್ಲಿ ಎಳೆದರು. ಕೆಸರು ನೀರಿನಲ್ಲೇ ಬಿದ್ದರು, ಒದ್ದಾಡಿದರು...

ದೇರಜೆ ಕುಟುಂಬಸ್ಥರ ಗದ್ದೆಯಲ್ಲಿ ಕ್ರೀಡೆಗಳು ನಡೆಯುತ್ತಿದ್ದರೆ, ಅದರ ಸಮೀಪವೇ ಪ್ರಾಕೃತಿಕ ಸ್ಟೇಡಿಯಂನಂತಿದ್ದ ಎತ್ತರವಾದ ಬಾಣೆಯಲ್ಲಿ ನೆರೆದ ಅಪಾರ ಜನಸ್ತೋಮ, ಕ್ರೀಡಾಪಟುಗಳನ್ನು ಹುರಿದುಂಬಿಸುತ್ತಿದ್ದರು. ವಾಹನಗಳ ದಟ್ಟಣೆ, ಜನದಟ್ಟಣೆಗಳ ನಡುವೆ ಎಸ್.ಐ. ಅರುಣ್‌ಕುಮಾರ್ ಕೋಳೂರ್ ಅವರ ನೇತೃತ್ವದಲ್ಲಿ ವಿಶೇಷ ಪೊಲೀಸ್ ಬಂದೋಬಸ್ತ್ ಏರ್ಪಡಿಸಲಾಗಿತ್ತು.

ನಾಟಿ ಓಟದ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಗೌರವ ಸಂಪ್ರದಾಯದಂತೆ "ದುಡ್ಡು", ಬಾಳೆಗೊನೆ, ತೆಂಗಿನಕಾಯಿ ಹಾಗೂ ಎಲೆಅಡಿಕೆ ನೀಡಿ ನಂತರ ಪ್ರಶಸ್ತಿ ವಿತರಿಸಲಾಯಿತು.

### ಸಮಾರೋಪ ಸಮಾರಂಭ

ಕೆಸರುಗದ್ದೆ ಕ್ರೀಡೋತ್ಸವದ ಸಮಾರೋಪ ಸಮಾರಂಭವು ಇಂದು ಅಪರಾಹ್ನ ೩.೩೦ ಗಂಟೆಗೆ ದೇರಜೆ ಕುಟುಂಬಸ್ಥರ ಪಟ್ಟೆದಾರ ದೇರಜೆ ಉತ್ತಯ್ಯ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಮುಖ್ಯ ಅತಿಥಿಗಳಾಗಿ ಪಾಲ್ಗೊಂಡು ಮಾತನಾಡಿದ ನಿವೃತ್ತ ಡಿವೈಎಸ್ಪಿ ಕೂಡಕಂಡಿ ಸೋಮಣ್ಣ ಅವರು, ಕೆಸರುಗದ್ದೆ ಕ್ರೀಡೆಗಳು ಭಾರತದಲ್ಲಿ-ಅದರಲ್ಲೂ ಹೆಚ್ಚಾಗಿ ಕೊಡಗಿನಲ್ಲಿ ಮಾತ್ರ ನಡೆಯುತ್ತಿರುವುದು ವಿಶೇಷ ಎಂದರು. ಈ ಕ್ರೀಡೆಗಳು ಗ್ರಾಮೀಣ ಜನರ ಮನೋಬಲ ಹಾಗೂ ದೇಹಬಲದ ಸಂಕೇತವಾಗಿದೆ. ದಕ್ಷಿಣ





ಕನ್ನಡ ಜಿಲ್ಲೆಯಲ್ಲಿ ಕೆಸರಿನಲ್ಲಿ ಕ್ರೀಡೆ ನಡೆಯುತ್ತದೆ. ಆದರೆ, ಇಲ್ಲಿನಂತೆ ಜನರು ಕೆಸರಿನ ಕ್ರೀಡೆಗಳಲ್ಲಿ ಭಾಗವಹಿಸುವುದಿಲ್ಲ. ವಿದೇಶಗಳಲ್ಲಿ ಕ್ರೀಡೆಗಳಿಗೆ ವಿಶೇಷ ಪ್ರೋತ್ಸಾಹ ನೀಡಲಾಗುತ್ತದೆ. ಆದರೆ ೧೦೦ ಕೋಟಿ ಜನಸಂಖ್ಯೆ ಮೀರಿರುವ ಭಾರತದಲ್ಲಿ ಅದಕ್ಕೆ ತದ್ವಿರುದ್ಧ ವಾತಾವರಣವಿರುವುದು ವಿಷಾದನೀಯ. ಇದರಿಂದಾಗಿ ನಮ್ಮಲ್ಲಿ ಉತ್ತಮ ಪ್ರತಿಭಾವಂತರು ಬೆಳಕಿಗೆ ಬಾರದ ದುರಂತ ಎದುರಾಗಿದೆ ಎಂದು ಅವರು ಖೇದ ವ್ಯಕ್ತ ಪಡಿಸಿದರು.

ಪುರಾತನ ಗ್ರೀಕ್‌ನ ಜ್ಯೂರ್ ಎಂಬ ಸ್ಥಳದಲ್ಲಿ ತಾವು ಕಲಿತ ಆಟೋಟಗಳನ್ನು ಜನರು ದೇವರ ಮೂರ್ತಿಗಳ ಮುಂದೆ ಪ್ರದರ್ಶಿಸುತ್ತಿದ್ದರು. ಅವರಿಗೆ ಮರದ ಕಿರೀಟಗಳನ್ನು ಪ್ರಶಸ್ತಿಯಾಗಿ ನೀಡಲಾಗುತ್ತಿತ್ತು. ಇದೇ ಮುಂದೆ ಕ್ರೀಡೆಗಳ ಉಗಮಕ್ಕೆ ನಾಂದಿ ಯಾಯಿತು. ಗೌಡ ಜನಾಂಗದಲ್ಲಿನ ಉತ್ತಮ ಕ್ರೀಡಾಪಟುಗಳನ್ನು ಬೆಳಕಿಗೆ ತರಲು, ಇಂತಹ ಪಂದ್ಯಗಳನ್ನು ನಡೆಸುವುದರೊಂದಿಗೆ, ದುರ್ಬಲ ವರ್ಗದ ಕ್ರೀಡಾಪಟುಗಳಿಗಾಗಿ ಆರ್ಥಿಕ ನೆರವು ನೀಡುವುದು ಅವಶ್ಯಕ ಎಂದ ಅವರು, ವಿಶಿಷ್ಟವಾದ ಈ ಕೆಸರು ಗದ್ದೆ ಕ್ರೀಡೆಗಳನ್ನು 'ಒಲಂಪಿಕ್ಸ್'ಗೆ ಪರಿಚಯಿಸುವ ಕುರಿತು ತಜ್ಞರನ್ನು ಸಂಪರ್ಕಿಸಬೇಕೆಂದು ಸಲಹೆ ನೀಡಿದರು.

ಸಮಾರಂಭದಲ್ಲಿ ಗೌಡ ಅಕಾಡೆಮಿ ಅಧ್ಯಕ್ಷರಾದ ತುಂತಜೆ ಗಣೇಶ್, ಗೌಡ ವಿದ್ಯಾ ಸಂಘದ ಅಧ್ಯಕ್ಷರಾದ ಕುಯ್ಯಮುಡಿ ಪೂರ್ಣಯ್ಯ, ಉಪಾಧ್ಯಕ್ಷ ಪಂಜಿಪಳ್ಳ ವೆಂಕಪ್ಪ, ಗೌಡ ಸಮಾಜದ ವ್ಯವಸ್ಥಾಪಕ ಚೆಟ್ಟಿಮಾಡ ರಘುಪತಿ, ಟ್ರೋಫಿ ದಾನಿಗಳಾದ ಪಾರೆಮಜಲು ವಿಶಾಲಾಕ್ಷಿ ಪುಟ್ಟಯ್ಯ, ಬೈಲೋಳಿರ ಬೆಳ್ಯಪ್ಪ ಗಣಪತಿ, ದಂಬೆಕೋಡಿ ಸುಬ್ರಮಣಿ ಮಂದಣ್ಣ, ಮೇರ್ಕಜೆ ಅಮ್ಮವ್ವ ಬೋಪಯ್ಯ, ಮಾಜಿ ಶಾಸಕ ದಂಬೆಕೋಡಿ ಮಾದಪ್ಪ, ದಂಬೆಕೋಡಿ ಸುಬ್ರಮಣಿ ಕುಟ್ಟಪ್ಪ, ಕಂದಾಯಾಧಿಕಾರಿ ಬೈಮನ ವಿಶ್ವನಾಥ್, ತಾ. ಪಂ. ಸದಸ್ಯ ಉಳುವಾರನ ಪಳಂಗಪ್ಪ, ಪಾಡಿಚೆಟ್ಟಿರ ಉತ್ತಪ್ಪ, ಅಕಾಡೆಮಿ ನಿರ್ದೇಶಕ ಕುದುಪಜೆ ಚಿಣ್ಣಪ್ಪ, ಮಾಜಿ ಯೋಧ ಚೆರಿಯಮನೆ ಪೆಮ್ಮಯ್ಯ, ಕಾಳೆಯಂಡ ಮನುಕುಮಾರ್, ಬೈಲೋಳಿರ ವನಿತಾ ಪ್ರಭಾಕರ್, ಕುಯಂತೋಡಿ ದೇವಯ್ಯ ಮೊದಲಾದವರು ಉಪಸ್ಥಿತರಿದ್ದರು.

ಆರಂಭದಲ್ಲಿ ತುಂಬೆರ ಬಿಂದು ಪ್ರಾರ್ಥಿಸಿದರು. ತುಂತಜೆ ಗಣೇಶ್ ಸ್ವಾಗತಿಸಿದರು. ಕೋಡಿ ಚಂದ್ರಶೇಖರ್ ಕಾರ್ಯಕ್ರಮ ನಿರೂಪಿಸಿದರೆ, ಕೊನೆಯಲ್ಲಿ ಹುದೇರಿ ನಾಗೇಶ್ ವಂದಿಸಿದರು.



## "ಲಾಯ್ಕಾಗಿ ಓಡ್ರಾ...ಎಳೀರಾ..." !

"ಲಾಯ್‌ಕಾಗಿ ಓಡ್ರಾ... ಬುಡ್ಬೇಡಾ.. ಎಳೀರಾ.."! ಇದು ಮುತ್ತಾರ್ಮುಡಿಯಲ್ಲಿ ನಡೆದ ಗೌಡ ಜನಾಂಗದ ಕೆಸರುಗದ್ದೆ ಕ್ರೀಡೋತ್ಸವದಲ್ಲಿ ಪ್ರೇಕ್ಷಕಾಂಗಣದಿಂದ ಹರಿದು ಬಂದ ಉತ್ತೇಜನದ ಕೂಗು.. ಮಕ್ಕಳು, ಮಹಿಳೆಯರು, ಪುರುಷರು, ವೃದ್ಧರಾದಿಯಾಗಿ ಎಲ್ಲಾ ವಯೋಮಾನದ ಕ್ರೀಡಾಪಟುಗಳು ಭಾಗವಹಿಸಿದ್ದ ಈ ಕ್ರೀಡೋತ್ಸವದಲ್ಲಿ ಒಂದೆಡೆ ಕೆಸರಿನ ಗದ್ದೆಯ ಮೈದಾನ ಮತ್ತೊಂದೆಡೆ ಸ್ಟೇಡಿಯಂನಂತಿರುವ ಎತ್ತರದ ಹುಲ್ಲುಗಾವಲು, ಇವೆರಡರ ನಡುವೆ ಹರಿಯುತ್ತಿರುವ ತೊರೆ ವಿಶೇಷವಾಗಿತ್ತು. ಕೆಸರಿನಲ್ಲಿ ಆಡಿ, ಬಿದ್ದು, ಒದ್ದಾಡಿ ಬಂದ ಕ್ರೀಡಾರ್ಥಿಗಳು ತೊರೆಯಲ್ಲೇ ಸ್ನಾನ ಮಾಡಿ, ಪ್ರೇಕ್ಷಕಾಂಗಣಕ್ಕೆ ಮರಳುತಿದ್ದರು. ಹಗ್ಗ ಜಗ್ಗಾಟದಲ್ಲಿ ಕಾಂತೂರು ತಂಡದ ಮಹಿಳೆಯೊಬ್ಬರು ಕೆಸರಿನಲ್ಲಿ ಹೂತು ಹೋದಾಗ ಇತರರು ಎಳೆಯುತ್ತಿದ್ದರೆ ಇತ್ತ ಮಕ್ಕಳು.."ಎಳಿಯಮ್ಮಾ..ಬುಡ್ಬೇಡಾ.." ಎಂದು ಉತ್ತೇಜಿಸುತ್ತಿದ್ದರು. ಕೊಂಪುಳಿರ ದಿನೇಶ್ ಎಂಬವರ ಪುತ್ರ ೧ನೇ ತರಗತಿ ವಿದ್ಯಾರ್ಥಿ ಕೊಂಪುಳಿರ ಜಗತ್ ಪೊನ್ನಪ್ಪ ಓಟದ ಸ್ಪರ್ಧೆಯಲ್ಲಿ ಪಾಲ್ಗೊಂಡು ಎಲ್ಲರ ಮೆಚ್ಚುಗೆ ಗಳಿಸಿದ.

ಕಾರ್ಯಕ್ರಮವನ್ನು ಗದ್ದೆನಾಟಿ ಮಾಡುವ ಮೂಲಕ ಹಾಗೂ ಅರೆಭಾಷೆಯ ಹಾಡಿನ ಮೂಲಕ ಮುಕ್ತಾಯಗೊಳಿಸಲಾಯಿತು.

ಒಟ್ಟಾರೆಯಾಗಿ "ಕೆಸ್ರ್ ಗದ್ದೆ ಓಟ, ಹಗ್ಗ ಎಳಿಯದು ನೋಡೀಕೆ ಬಾರಿ ಲಾಯ್‌ಕಾಗಿ ಇತ್ತ್. ಹೆಣ್ಣ್ ಮಕ್ಕ, ದೊಡ್ಡವ್ ಓಡ್ವಾನ ನೆಂಟ್ರ್‌ಗಳ್ಗೆ ಸಮೇತ ನಾವ್ ಕೂಡಾ ಓಡಿಬುಡ್ವಾಂತ ಆಗಿತ್ತ್........

ನಂಬಿಕೆ ಶ್ರದ್ಧೆಯಿಲ್ಲದೆ ಬದುಕುವುದೇ ಸಾಧ್ಯವಿಲ್ಲ. ಅದಿಲ್ಲದ ಬಾಳು ಅಂಬಿಗನಿಲ್ಲದ ದೋಣಿಯಂತೆ

### ಕೆಸರುಗದ್ದೆ ಕ್ರೀಡೋತ್ಸವದ ವಿಜೇತರ ವಿವರ :

ಮುತ್ತಾರ್ಮುಡಿ, ಜು. ೨೩- ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿ ವತಿಯಿಂದ ಆಯೋಜಿತವಾಗಿದ್ದ ಕೆಸರು ಗದ್ದೆ ಕ್ರೀಡೋತ್ಸವ ದಲ್ಲಿ ವಿಜೇತರಾದವರ ವಿವರ ಈ ಕೆಳ ಕಂಡಂತಿದೆ.

**ಓಟದ ಸ್ಪರ್ಧೆ.**

ಪ್ರಾಥಮಿಕ ಶಾಲಾ ಬಾಲಕಿಯರಲ್ಲಿ ಪ್ರಥಮ ಕುಂಟಿಕಾನ ರೇಷ್ಮಾ, ದ್ವಿತೀಯ ಮುಕ್ಕಾಟಿ ಧನ್ಯ, ಬಾಲಕರಲ್ಲಿ ಅರಂಬೂರು ದಿನೇಶ್ ಪ್ರಥಮ, ದೇರಜೆ ಸಂಪತ್ ದ್ವಿತೀಯ, ಪ್ರೌಢ ಶಾಲಾ ಬಾಲಕಿಯರ ವಿಭಾಗದಲ್ಲಿ ಪ್ರಥಮ ಮುಕ್ಕಾಟಿ ಸರಿತಾ, ದ್ವಿತೀಯ ಮುಕ್ಕಾಟಿ ಶ್ವೇತಾ, ತೃತೀಯ ದೊಡ್ಡೇರ ರಮ್ಯ ಹಾಗೂ ಬಾಲಕರ ವಿಭಾಗದಲ್ಲಿ ಪ್ರಥಮ ದಂಬೆಕೋಡಿ ದಿಗಂತ್, ದ್ವಿತೀಯ ದೇರಜೆ ಕಿರಣ್ ಮತ್ತು ತೃತೀಯ ಸ್ಥಾನವನ್ನು ಅಚ್ಚಲ್‌ಪಾಡಿ ಪವನ್ ಗಳಿಸಿದ್ದಾರೆ.

ಜೂನಿಯರ್ ಕಾಲೇಜು ಯುವತಿಯರ ವಿಭಾಗದಲ್ಲಿ ಪಾಡ್ಯನ ವನಿತಾ, ಪೈಕೇರ ಅಶ್ವಿನಿ, ದೊಡ್ಡೇರ ಮೋನಿಕಾ, ಯುವಕರ ವಿಭಾಗದಲ್ಲಿ ಕಡಂಜ ಅಪ್ಪಾಜಿ ಅಲಪೆಮನೆ ಶಶಿಕುಮಾರ್ ಹಾಗೂ ಕೋಳಿಮಾಡ್ ಉಮೇಶ್ ಕ್ರಮವಾಗಿ ಪ್ರಥಮ, ದ್ವಿತೀಯ ಹಾಗೂ ತೃತೀಯ ಬಹುಮಾನ ಗಳಿಸಿದ್ದಾರೆ. ಕಾಲೇಜು ವಿಭಾಗದ ಯುವತಿಯರಲ್ಲಿ ಪ್ರಥಮ ಕಾವೇರಿ ಮನೆ ರೋಶನಿ, ದ್ವಿತೀಯ ತುಂಬೆರ ಬಿಂದು, ಯುವಕರಲ್ಲಿ ಬಾಲಡಿ ಮನೋಜ್ ಕುಮಾರ್ ಪ್ರಥಮ ಹಾಗೂ ನಂಗಾರು ಭುನೇಶ್ ದ್ವಿತೀಯ ಸ್ಥಾನ ಗಳಿಸಿದ್ದಾರೆ. 50 ವರ್ಷ ಮೇಲ್ಪಟ್ಟವರಿಗಾಗಿ ನಡೆದ ಓಟದ ಸ್ಪರ್ಧೆಯಲ್ಲಿ ಬೈಮನ ವಿಶ್ವನಾಥ್ (ಕಂದಾಯಾಧಿಕಾರಿ) ಕಡ್ಲೇರ ಉತ್ತಪ್ಪ, ಕೊಂಪುಳಿರ ಅಪ್ಪಾಜಿ ಕ್ರಮವಾಗಿ ಪ್ರಥಮ, ದ್ವಿತೀಯ ಹಾಗೂ ತೃತೀಯ ಸ್ಥಾನ, ಪುರುಷರ ವಿಭಾಗದಲ್ಲಿ ಕರ್ಣಯ್ಯನ ಗಣೇಶ್ ಕುಮಾರ್, ಅಮೆ ನವೀನ, ಗುಡ್ಡೆ ಮನೆ ಲಕ್ಷ ಹಾಗೂ ಮಹಿಳೆಯರಲ್ಲಿ ಕೊಂಪುರ ಜಯಶ್ರೀ, ತೆಕ್ಕಡೆ ಶೀಲಾ, ಬಿಳಿಯಾರ ರೂಪ ಕ್ರಮವಾಗಿ ಪ್ರಥಮ, ದ್ವಿತೀಯ ಹಾಗೂ ತೃತೀಯ ಸ್ಥಾನಗಳಿಸಿದ್ದಾರೆ.

**ಹಗ್ಗ-ಜಗ್ಗಾಟ**

ಪುರುಷರ ವಿಭಾಗದಲ್ಲಿ ಪಾರಾಣೆ ಗೌಡ ಸಮಾಜ ಪ್ರಥಮ, ನರಿಯಂದಡ ತಂಡ ದ್ವಿತೀಯ ಹಾಗೂ ಮಹಿಳೆಯರ ವಿಭಾಗದಲ್ಲಿ ಕಟ್ಟೆ ಮಾಡು ತಂಡ ಪ್ರಥಮ ಮತ್ತು ಕಾಂತೂರು ತಂಡ ದ್ವಿತೀಯ ಸ್ಥಾನ ಗಳಿಸಿದೆ. ಪಂದ್ಯಾಟದ ವೇಳೆ ಅಂಗಡಿ ಮಳಿಗೆಗಳು, ಗೌಡ ಜನಾಂಗದ ಸಂಸ್ಕೃತಿ ಬಿಂಬಿಸುವ ಬ್ಯಾಡ್ಜಂ, ಕೀಜೈನ್, ಸ್ಟಿಕ್ಕರ್‌ಗಳ ಮಾರಾಟವೂ ನಡೆದಿತ್ತು. ಬೈತಡ್ಕ ಜಾನಕಿ ಬೆಳ್ಯಪ್ಪ ಅವರ ' ಹಸೆಮಣೆ' ಪುಸ್ತಕ ಮಾರಾಟಕ್ಕಾಗಿ ವಿಶೇಷ ವ್ಯವಸ್ಥೆ ಮಾಡಲಾಗಿತ್ತು.

ತಾಂ. ಪಂ. ಸದಸ್ಯರಾದ ಎಂ.ಪಿ. ಮುತ್ತಣ್ಣ ಹಾಗೂ ವಿವಿಧ ಇಲಾಖಾಧಿಕಾರಿಗಳು ಹಾಜರಿದ್ದರು.

---

## ಮಹಿಳೆಯ ಅಂತರಂಗ

ಸೂರ್ಯ ಎಂದರೆ ನಿರಂತರ ಗತಿ ಶೀಲತೆಯ ಪ್ರತ್ಯೇಕ ಎಡೆಬಿಡದೆ ತನ್ನ ಕರ್ತವ್ಯಗಳನ್ನು ಪೂರೈಸುತ್ತಾ ಜಗತ್ತಿನ ಚರಾಚರಗಳಿಗೆಲ್ಲಾ ತನ್ನ ಬೆಳಕನ್ನು ಧರೆಗೆ ಓಕುಳಿ ಚೆಲ್ಲಿದಂತೆ ಬೆಳಕನ್ನು ನೀಡುತ್ತಾನೆ.

ಕಲಿಯಲು ಮನಸ್ಸಿದ್ದವರಿಗೆ ರವಿ(ಸೂರ್ಯ) ನಿಂದ ನಿರಂತರ ಪ್ರೇರಣೆ ದೊರೆಯುತ್ತದೆ. ನಾವು ಕೂಡ ಅಂತಹ ಪ್ರೇರಣೆ ಪಡೆಯ ಬಹುದು ಅಲ್ಲವೇ?

ನಾವು ಕೆಲವು ಮಹಿಳೆಯರ ಬಗ್ಗೆ ಕೆಲವು ಪತ್ರಿಕೆಗಳಲ್ಲಿ, ಹರಟೆ ಹೊಡೆಯುವುದರ ಬಗ್ಗೆ, ಇನ್ನೊಬ್ಬರ ಕುಚ್ಯೋದ್ಯ ಮಾತುಗಳ ಬಗ್ಗೆ ಬಣ್ಣಿಸುವುದು ಇಂತಹ ಪ್ರಸಂಗಗಳನ್ನು ಓದುತ್ತೇವೆ. ಹಾಗೂ ಒಂದೊಂದು ಸಲ ಕಣ್ಣಿಂದ ನೋಡುತ್ತೇವೆ. ಇಂತಹ ಸನ್ನಿವೇಶಗಳನ್ನು ನೆನಪಿಸಿಕೊಂಡರೆ ಇದು ಸತ್ಯವೆಂದು ಹೇಳಬಹುದು. ಮಹಿಳೆಯರು ಜೊತೆಗೂಡಿದರಂತು ಹೇಳಲಾಗದು, ತಮ್ಮ ಮನೆಕೆಲಸ ಕಾರ್ಯಗಳನ್ನು ಮರೆತು ಮಾತಲ್ಲಿ ತಲ್ಲೀನರಾಗಿ Stovನಲ್ಲಿ ಇಟ್ಟ ಪದಾರ್ಥಗಳು ತಳ ಹಿಡಿದ ವಾಸನೆ ಸೀದಾ ಮೂಗಿಗೆ ಬಡಿದಾಗಲೆ ಎಚ್ಚರ! ರೀ, ಒಂದೇ ಒಂದು ನಿಮಿಷ ಬಂದೇರೀ ಅಂತ ಹೇಳಿ ಹೋಗುವುದು ಸರ್ವಸಾಮಾನ್ಯ ಇಂತಹ ಸಮಯದಲ್ಲಿ ನಮಗೆ ನಷ್ಟವೇ ಹೊರತು ಲಾಭವಿಲ್ಲ. ಮಹಿಳೆಯರಲ್ಲಿ ಅಂತರಂಗ, ಮೂಡಿ ಬರುವ ಅನುಕಂಪ, ದಯೆ, ಕರುಣೆ, ತಾಳ್ಮೆ, ಮೃದು ಸ್ವಭಾವ, ಇವೆಲ್ಲಕ್ಕೂ ಕಾರಣವಿರ ಬಹುದು ಎಂದು ಹೇಳಬಹುದು.

ಒಮ್ಮೆ ಯೋಚಿಸಿದರೆ ನಾವು ನಿತ್ಯವು 5 ಗಂಟೆಯ ಕಾಲ ಸಮಯವನ್ನು ವ್ಯರ್ಥಮಾಡುತ್ತೇವೆ, ಎಂದು ಅನಿಸಿದರೆ ಅದು ತಪ್ಪಾಗಲಾರದು, ಮನೆಯಲ್ಲಿ ಗಂಡ ಆಫೀಸಿಗೆ ಹೋದ ಮೇಲೆ, ಗೃಹಿಣಿ ಜೊತೆಯ ಮಹಿಳೆಯರು ಇಲ್ಲದಿದ್ದಲ್ಲಿ ತುಂಬಾ ಬೇಸರ ಬರುವುದು ಸಹಜ ಹಾಗೂ ಮಕ್ಕಳು ಶಾಲೆಗೆ ಹೋದ ಮೇಲೆ ಕೂಡ ತುಂಬಾ ಬೇಸರವಾಗುತ್ತದೆ. ಅಂತಹ ಸಮಯದಲ್ಲಿ ಮ್ಯಾಗ್ಸೈನ್, ಕೈಗಾರಿಕೆ, ಅಥವಾ ನಾನಾ ಬಗೆಯ ಹೊಸ ಹೊಸ, ರುಚಿಗಳ ತಿಂಡಿ ತಿನಿಸುಗಳು, ಕಸೂತಿಗಳು, ಇಂತಹವುಗಳನ್ನು ಆರಸಿಕೊಂಡರೆ ಮನಸ್ಸಿಗೆ ತುಂಬಾ ಮುದ ಕೊಡುತ್ತವೆ ಹಾಗೂ ಸಂತೋಷ ಕೂಡ, ಮನೆ ಓರಣವಾಗಿ ಇಡುವುದು, ಕೂಡ, ಮಹಿಳೆಯರಿಗೆ ಮನೆಯಲ್ಲಿ News Paper, ಓದಿಕೊಳ್ಳುವುದರಿಂದ ಹೊರ ರಾಜ್ಯಗಳ ಆಗು ಹೋಗುಗಳು, ಮತ್ತು ಅಕ್ಕ ಪಕ್ಕದವರಿಂದ ಜೊತೆಗೂಡಿ ಮಾತನಾಡುವುದರಿಂದ ಅವರ ಸುಖ ದುಃಖಗಳು ಇಂತಹ ವಿಶಯಗಳಲ್ಲಿ ಮಹಿಳೆಯರಿಗೆ ಆಸಕ್ತಿ ಜಾಸ್ತಿ ಮತ್ತು ಕಾಳಜಿ ಕೂಡ. ಅಲ್ಲೇನಾಯ್ತು, ಇಲ್ಲೇನಾಯ್ತು, ಅವಳು ಯಾವ ಸೀರೆ ಉಟ್ಟಳು, ಇವಳು ಯಾವ ಡಿಸೈನ್ ಸೀರೆ ಕೊಂಡಳು, ಯಾವ ಸಿನಿಮಾಕ್ಕೆ ಹೋದಳು ಇಂತಹ ವಿಷಯಗಳಲ್ಲಿ ಮಹಿಳೆಯರಿಗೆ

---

ಕಾಳಜಿ ಹೆಚ್ಚಾಗುತ್ತದೆ.

ಆದರೆ ಅಲ್ಲಿಗೆ ಅಸೂಯೆ ಪಡದೆ ಅವರ ಬಗೆಗಿನ ಆಸಕ್ತಿ ಇದ್ದು ಸುಖ ದುಃಖಗಳಿಗೆ ಸ್ಪಂದಿಸುವ ಅಂತರಂಗದ ಮನೋಭಾವನೆ ಮೂಡಿ ಬರುವಂತಾಗಿರಬೇಕು, ಮಹಿಳೆಯರು ತನ್ನ ಸಮಯವನ್ನು ವ್ಯರ್ಥಮಾಡದೆ ಅದಕ್ಕಾಗಿ ಮಹಿಳೆಯರು ಸಂಘಟಿ ತರಾಗಬೇಕು. ಮಹಿಳೆಯರು ಪಟ್ಟಣಗಳಲ್ಲಿ ಸೀಮಿತವಾಗದೆ ಹಳ್ಳಿ ಹಳ್ಳಿಗಳಲ್ಲಿ ಮಹಿಳಾ ಮಂಡಳಿ, ಸಮಾಜ ಕಲ್ಯಾಣ, ಯುವತಿ ಮಂಡಳಿ, ಇವುಗಳನ್ನು ಆರಂಭಿಸಿ, ಶ್ರೀಮಂತರ ಪ್ರದೇಶದ ಮಹಿಳೆಯರಿಗೆ ಹಿತ ಶಕ್ತಿಯಿಂದ ಪಾಲುಗೊಳ್ಳಲು ಅರಿವು ಮೂಡಿಸುವಂತಾಗ ಬೇಕು ಹೆಣ್ಣು ಕುಟುಂಬದ ಒಂದು ಕಣ್ಣು ಇದ್ದಂತೆ ಹೆಣ್ಣಿಗೆ ಅವಕಾಶ ನೀಡಿದೆ. ಆದರೆ ಸಮಾಜದ ಕಣ್ಣು ತೆರೆಯಿಸ ಬಲ್ಲಳು. ಅವಳಿಗೆ ಸ್ಫೂರ್ತಿ, ಶಕ್ತಿ ಪ್ರೋತ್ಸಾಹವಿದ್ದರೆ ಒಂದು ಮನೆಯನ್ನು ಸ್ವರ್ಗವಾಗಿಯೋ, ನರಕವಾಗಿಯೋ ಮಾಡಬಲ್ಲ ಶಕ್ತಿ ಹೆಣ್ಣಿನಲ್ಲಿದೆ. ಹೆಣ್ಣು ತಾನು ಸೇರಿದ ಮನೆಯನ್ನು ನಂದ ಗೋಕುಲವಾಗಿ ಮಾಡ ಬಯಸುತ್ತಾಳೆ, ಆದರೆ ಕೆಲವು ಸಲ ಸಂದರ್ಭಕ್ಕೆ ಅನುಗುಣವಾಗಿ ತಾಳ್ಮೆಗೆಡುವಂತಹ ಪ್ರಸಂಗವು ಒದಗುವವು. ಈವಾಗ ಹೆಚ್ಚಾಗಿ ಮಹಿಳೆಯರು ಉದ್ಯೋಗಸ್ಥರಾಗಿರುವುದು ತುಂಬಾ ಸಂತೋಷ, ಓದು, ಬರಹ ಕಲಿತ ಹೆಣ್ಣು ನೌಕರಿ ಪಡೆದಾಗ, ಆದಾಯವು ಹೆಚ್ಚಾದಂತೆ ಮಹಿಳೆಗೆ ಪಡೆದ ಶಿಕ್ಷಣ ಸಾರ್ಥಕವೆನಿಸುತ್ತದೆ. ಇತ್ತೀಚೆಗಂತೂ, ವಯಸ್ಕರ ಶಿಕ್ಷಣ, ಬಾಲವಾಡಿ, ಯುವತಿ ಮಂಡಳಿ, ಅಂಗನವಾಡಿ ಮತ್ತು ಮಹಿಳೆಯರ ಸಂತೋಷಕೂಟ ಇಂತಹ ಕಾರ್ಯಕ್ರಮದಲ್ಲಿ ಅಭಿರುಚಿ ತೋರಿಸಿದರೆ ಮನಸ್ಸಿಗೆ ಚೈತನ್ಯ, ಶಕ್ತಿ ಉತ್ಸಾಹಗೊಳ್ಳುತ್ತದೆ. ಈ ಸಮಾಜದ ಬಡವರ ಉದ್ಧಾರಕ್ಕಾಗಿ ನಾವು ಸಹಕರಿಸಿದರೆ ನಮ್ಮ ಸಮಾಜ ಅಭಿವೃದ್ಧಿ ಯಾಗುವುದು ಸುಲಭ, "ಅಯ್ಯೋಬಿಡಿ" ನಮ್ಮ ಮನೆ ಕೆಲಸ ಜಾಸ್ತಿ ಇರುವಾಗ ನಮಗೆ ಪುರಸೊತ್ತು ಎಲ್ಲಿ? ಎಂದು ಹೇಳುವ ಮಾತು ಸರಿಯಲ್ಲ, T. V. ನೋಡಲು, ಹರಟೆ ಹೊಡೆಯಲು, ಸಮಯ, ಅವಕಾಶ ಮಾಡಿಕೊಂಡಂತೆ ನಮ್ಮ ಸಮಾಜದ ಕರ್ತವ್ಯಕ್ಕಾಗಿ ಸಮಯ ಮೀಸಲಿಡಲು ಮನಸ್ಸಿದ್ದರೆ ಕಷ್ಟವಾಗಲಾರದು.

"ಮನಸ್ಸಿದ್ದರೆ ಮಾರ್ಗವಿದೆ" ಎಂಬ ಗಾದೆಯಾದರೆ, ಮನಸ್ಸಿದ್ದರೆ ಎಲ್ಲಾವು ಸಾಧ್ಯವಾಗುತ್ತದೆ ಅಲ್ಲವೆ?

ಅಜಡ್ಕ ರಾಣಿ ಬಾಲಕೃಷ್ಣ, ಕುಶಾಲನಗರ.

---

## ಸಾಮಾಜಿಕ ಬದಲಾವಣೆಗಳು

ಇಂದಿನ ಮಕ್ಕಳೇ ಮುಂದಿನ ಪ್ರಜೆಗಳು ಎಂಬ ಹೇಳಿಕೆ ಪ್ರಖ್ಯಾತಿ ಪಡೆದಿದೆ. ನಮ್ಮ ದೇಶದ ಭವಿಷ್ಯ ಈಗಿನ ಮಕ್ಕಳನ್ನು ಅವಲಂಬಿಸಿದೆ. ಆದುದರಿಂದ ಮಕ್ಕಳಿಗೆ ಸರಿಯಾದ ಎಂದರೆ ಅವರಿಗೆ ಆಸಕ್ತಿ ಇರುವ ಕ್ಷೇತ್ರದಲ್ಲಿ ವಿದ್ಯಾಭ್ಯಾಸ ಒದಗಿಸುವುದು ತಂದೆತಾಯಿಯರ ಹಾಗೂ ಸಮಾಜದ ಹೊಣೆಗಾರಿಕೆಯಾಗಿದೆ. ಮೇಲಾಗಿ ಯಾವದೇ ರೀತಿಯ ವಿದ್ಯಾಭ್ಯಾಸದ ಮುಖ್ಯ ಉದ್ದೇಶ ವೇನೆಂದರೆ ಒಂದು ವ್ಯಕ್ತಿಯನ್ನು ಉತ್ತಮವಾದ ಪ್ರಜೆಯನ್ನಾಗಿ ಮಾಡುವುದು. ಅದು ಸಾಧ್ಯವಾಗದಿದ್ದಲ್ಲಿ ವಿದ್ಯೆಗೆ ಏನಾದರೂ ಅರ್ಥವಿದೆಯೆ? ಅದು ಹಾಗಿರಲಿ, ಈಗ ನಮ್ಮ ಇಂದಿನ ಸಮಾಜದ ಸ್ಥಿತಿಯನ್ನು ಪರಿಗಣಿಸಿದಾಗ ನಮ್ಮ ಕಣ್ಣು ಮುಂದೆ ಕಂಪ್ಯೂಟರ್ ಯುಗ ಕಾಣುವುದು. ಈ ಯುಗವನ್ನು ಯಾರಿಂದಲೂ ಅಳೆಯಲು ಸಾಧ್ಯವಿಲ್ಲ. ಕಾರಣ ಇಂದಿನ ಸಮಾಜದ ಬೆಳವಣಿಗೆಯ ಗತಿಯು ವಿಪರೀತವಾಗಿದೆ. ಇಂದಿನ ಜೀವನವು ಒಂದು ಸ್ಪರ್ಧಾತ್ಮಕವಾದ ಜೀವನವಾಗಿದೆ (Competetiveness) ಹೀಗಿರುವಾಗ ಒಬ್ಬ ವ್ಯಕ್ತಿ ಇಡುವ ಪ್ರತಿಯೊಂದು ಹೆಜ್ಜೆಯೂ ಪ್ರಾಮುಖ್ಯತೆಯನ್ನು ಪಡೆಯುತ್ತದೆ.

ಕಂಪ್ಯೂಟರ್ ಟೆಕ್‌ನಾಲಜಿ(Computer technology) ನಮ್ಮ ಜೀವನದ ಹಲವಾರು ಕ್ಷೇತ್ರಗಳಿಗೆ ಪಾದಾರ್ಪಣೆ ಮಾಡಿದೆ. ಮುಖ್ಯವಾಗಿ ಹೇಳುವುದಾದರೆ, ಪತ್ರ ವ್ಯವಹಾರ, ಅಂಕಿ ಸಂಖ್ಯೆ ಪ್ರಕ್ರಿಯೆ, ವ್ಯಾಪಾರ ವಹಿವಾಟು, ಕಛೇರಿಗಳಲ್ಲಿನ ವಿವಿಧ ರೀತಿಯ ಕೆಲಸಗಳು, ಕೈಗಾರಿಕಾ ಕ್ಷೇತ್ರ, ಮೊದಲಾದವು ಗಳು. ಒಂದು ಕಂಪ್ಯೂಟರ್‌ನ ಲೆಕ್ಕಮಾಡುವ ಸಾಮರ್ಥ್ಯ (Computing Capacity) ಸಾವಿರಾರು ಜನರಿಗೆ ಸಮಾನವಾಗಿದೆ. ಎಲ್ಲಾ ಕ್ಷೇತ್ರಗಳಿಗಿಂತ ಮುಖ್ಯವಾಗಿ ಮಾಹಿತಿ ತಂತ್ರಜ್ಞಾನ (Information technology) ಇಂದಾಗಿ ಪ್ರತಿಯೊಬ್ಬರ ಜೀವನವು ಗಮನಾರ್ಹವಾಗಿ ಬದಲಾವಣೆಯಾಗುತ್ತಿದೆ. ಇದರ ಉಪಯೋಗವನ್ನು ಸರಳವಾಗಿ ಹೇಳುವುದಾದರೆ ಒಬ್ಬ ಮನುಷ್ಯ ಜಗತ್ತಿನ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಯಾವದೇ ರೀತಿಯ ಮಾಹಿತಿಯನ್ನು ಕೇವಲ ನಿಮಿಷಗಳಲ್ಲಿ ಕಳುಹಿಸ ಬಹುದು ಹಾಗೂ ಪಡೆಯಬಹುದು! ಇದೇನು ಹೊಸ ವಿಷಯವಲ್ಲ, ಆದರೆ ಇಂದು ಈ ತಂತ್ರಜ್ಞಾನವು ಪ್ರತಿಯೊಬ್ಬರಿಗೂ ಎಟುಕು ವಂತಾಗಿದೆ. ಇಂಟರ್‌ನೆಟ್ ಸೌಲಭ್ಯವನ್ನು ತಮ್ಮ ಮನೆಯಲ್ಲೇ ಅಳವಡಿಸಿಕೊಳ್ಳಬಹುದಾಗಿದೆ ಅಥವ ಬ್ರವ್‌ಸಿಂಗ್ ಸೆಂಟರ್‌ಗಳಿಗೆ (Browsing Center) ಹೋಗಿ ಈ ಸೌಲಭ್ಯವನ್ನು ಪಡೆಯ ಬಹುದಾಗಿದೆ. ಈ ಸೌಲಭ್ಯ ವನ್ನು ಪತ್ರಬರೆದು ಕಳುಹಿಸಲು, ಬಂದ ಪತ್ರವನ್ನು ಓದಲು, ಹರಟೆ ಹೊಡೆಯಲು, ವ್ಯಾಪಾರಿಕಾ ಒಪ್ಪಂದಗಳನ್ನು ಮಾಡಲು, ಶೇರು ವಹಿವಾಟುಮಾಡಲು, ಯಾವದೇ ವಿಷಯದ ಬಗ್ಗೆ ಮಾಹಿತಿ ಪಡೆಯಲು ಮತ್ತು ಇನ್ನೂ ಹತ್ತು ಹಲವಾರು ರೀತಿಯ ಮಾಹಿತಿಗಳನ್ನು ನೀಡಲು ಸಾವಿರಾರು ವೆಬ್‌ಸೈಟ್‌ಗಳು ಇವೆ. ಕೆಲವು ವೆಬ್‌ಸೈಟ್‌ಗಳಂತು ತಮ್ಮ ದೇಶದ ಮಿಲಿಟರಿ ಗುಟ್ಟನ್ನೂ (Military Secrets) ಪ್ರಕಾಶ ಪಡಿಸಲೂ ಹಿಂಜರಿದಿಲ್ಲ. ಹೀಗೆ ಅನೇಕ ಅವಶ್ಯ ಮಾಹಿತಿಗಳು ಒಬ್ಬನಿಂದ ಇನ್ನೊಬ್ಬನಿಗೆ, ಒಂದು ದೇಶದಿಂದ ಇನ್ನೊಂದು ದೇಶಕ್ಕೆ, ಒಂದು ಸಂಸ್ಥೆಯಿಂದ ಇನ್ನೊಂದು ಸಂಸ್ಥೆಗೆ ಕೇವಲ ನಿಮಿಷಗಳಲ್ಲಿ ತಲುಪಬಹುದಾದರೆ ಜೀವನದ ವಹಿವಾಟುಗಳ ಶೀಘ್ರತೆಯನ್ನು

19ನೇ ಪುಟಕ್ಕೆ

---

ಮಾತಿನ ದುಂದುಗಾರಿಕೆ ಹೇಗೆ ಆದರ್ಶವಲ್ಲವೋ ಹಾಗೆಯೇ ಮಾತೇ ಆಡದಿರುವುದು ಕೂಡ ಆದರ್ಶವಲ್ಲ




✦ ಕೌಂಡಿನ್ಯ

**ಧಾರವಾಹಿ -37**

ವೀರಭದ್ರನ ಕೈಯಲ್ಲಿ ಮುಚ್ಚಳ ತೆರೆದಿರುವ ಆಸಿಡ್ ಸೀಸೆ ಇದೆ !

ಕೋಪದಿಂದ ಹಲ್ಲು ಕಡಿಯುತ್ತಿದ್ದಾನೆ. ವೀರ ಭದ್ರ ಹೇಳಿದಂತೆ ಪ್ರಸನ್ನ ಬರೆಯುತ್ತಿದ್ದಾನೆ. ಅದು ಆತ್ಮಹತ್ಯೆಯ ಅಂತಿಮ ಪತ್ರ !

ಬಲವಂತವಾಗಿ ಬರೆಯುತ್ತಿದ್ದಾನೆ !

ಪ್ರಸನ್ನ ಬರೆಯುತ್ತಲೇ ಓರೆಗಣ್ಣಿನಿಂದ ತನ್ನ ಅಣ್ಣನ ಕಡೆ ನೋಡಿದನು. ಬಲದ ಕೈಯಿನ ಹತ್ತಿರ ಪೇಪರು ವೆಯಿಟ್ ಇತ್ತು ! ತಡಮಾಡಲಿಲ್ಲ ಪ್ರಸನ್ನ !

ಪೇಪರ್ ವೆಯಿಟ್ ಅನ್ನು ಎತ್ತಿ ಚುರುಕಾಗಿ ವೀರಭದ್ರನ ಮೇಲೆ ಎಸೆದನು.

ಅದು ಆಸಿಡ್ ಸೀಸೆ ಇದ್ದ ಕೈಗೆ ಬಡಿಯಿತು. ಸೀಸೆ ಕೈಯಿಂದ ಜಾರಿತು ! 'ಬಡ್' ಎಂದು ಒಡೆಯಿತು !

ಒಂದೆರಡು ಹನಿ ಕೈಗೆ ಹಾರಿತು !

ವೀರಭದ್ರ ವಿಕಾರವಾಗಿ ಕೂಗಿಕೊಂಡನು.

ಪ್ರಸನ್ನ ಈ ಅವಕಾಶ ಬಿಡುವನೇ ತನ್ನ ಅಣ್ಣನನ್ನು ತಳ್ಳಿಕೊಂಡು ರೂಮಿನಿಂದ ಹೊರಗೆ ಓಡಿದನು.

ಆಸಿಡ್ ಸೀಸೆ ಒಡೆದು ರತ್ನಗಂಬಳಿ ಈಗ ಹತ್ತಿಕೊಂಡು ಉರಿಯುತ್ತಿದೆ !

ಹೇಗೆ.... ಹೇಗೆ ಬರುತ್ತಿದೆ.

ವೀರಭದ್ರ ನೋವು, ಉರಿ, ಕೋಪ, ಆವೇಶದಿಂದ ಅಬ್ಬರಿಸುತ್ತಾ "ಲೋ.... ಲೋ.... ಪ್ರಸನ್ನ ನಿನ್ನನ್ನು ನಡು ರಸ್ತೆಯಲ್ಲಿಯೇ ಅಟ್ಟಾಡಿಸಿಕೊಂಡು ಹೊಡೆದು ಸಾಯಿಸುತ್ತೇನೆ" ಎಂದು ಬಂಗಲೆಯಿಂದ ಹೊರ ಬಂದು ಓಡಲಾರಂಭಿಸಿದನು.

ವೀರಭದ್ರ ಹಿಂದೆ ಓಡಿ ಬರುತ್ತಿದ್ದಾನೆ. ಪ್ರಸನ್ನ ಅವನಿಗಿಂತ ಮುಂದೆ ತುಂಬಾ ದೂರದಲ್ಲಿದ್ದಾನೆ !

ಆಗ ರಾತ್ರಿ ಎರಡು ಗಂಟೆ !

ಊರಿನ ಜನಗಳೆಲ್ಲಾ ಮಲಗಿದ್ದರು. ಆದರೆ ತೆರೆದಿದ್ದ ಕಿಟಕಿಯ ಮೂಲಕ ಅಣ್ಣ-ತಮ್ಮ ಓಡುತ್ತಿರುವುದನ್ನು ಬೇರೊಂದು ಮುಖ್ಯವಾದ ವ್ಯಕ್ತಿ ಕಂಡು ಹೊರಗೆ ಬಂದಿತು !

ಮೊದಲು ಪ್ರಸನ್ನ !

ನಂತರ ವೀರಭದ್ರ !

ಈ ವ್ಯಕ್ತಿ ಈಗ ತುಂಬಾ ಚುರುಕಾಗಿ ಓಡಿ ಬಂದು ರಸ್ತೆಗೆ ಅಡ್ಡಲಾಗಿ ನಿಂತುಕೊಂಡಿತು.

ವೀರಭದ್ರನಿಗೆ ಅಡ್ಡಲಾಗಿ!

* * *

ರೇವತಿಗೆ ನಿದ್ರೆ ಬಂದಿರಲಿಲ್ಲ !

ಅವಳು ಆಸ್ಪತ್ರೆಯ ಮಂಚದಿಂದ ಎದ್ದು ಹೊರಗೆ ಬಂದು ಜಗುಲಿಯ ಮೇಲೆ ನಿಂತು ಕೊಂಡಳು.

ತಂಗಾಳಿ ಹಿತವಾಗಿ ಬೀಸುತ್ತಿದೆ !

ಆಗ ರಾತ್ರಿ ಎರಡು ಗಂಟೆ !

ರೇವತಿಯ ತಲೆಗೆ ಬ್ಯಾಂಡೇಜ್ ಹಾಕಲಾಗಿದೆ. ಅವಳು ಈಗ ಚೇತರಿಸಿಕೊಳ್ಳುತ್ತಿದ್ದಾಳೆ.

ಆಹ್ಲಾದಕರ ರಾತ್ರಿಯ ದೃಶ್ಯ !

ನಿಶ್ಶಬ್ದತೆ.... ನೀರವತೆ !

ಬಿಕೋ ಎನ್ನುತ್ತಿರುವ ರಸ್ತೆ !

ರಾತ್ರಿಯ ಕತ್ತಲಲ್ಲಿ ಬೆಳೆಯುವ ಮರಗಳು ವಿಕೃತ ರೂಪ ತಳೆದಂತೆ ಭಾಸವಾಗುತ್ತಿದೆ !

ಶುಭ್ರವಾದ ಆಕಾಶ !

ಬೆಳದಿಂಗಳನ್ನು ಹರಡಿರುವ ಹುಣ್ಣಿಮೆ ಚಂದಿರ! ಮನಸ್ಸಿಗೆ ಮುದ ಕೊಡುವ ಏಕಾಂತ ರಾತ್ರಿ !

ರೇವತಿ ಆಲೋಚಿಸುತ್ತಿದ್ದಾಳೆ.

ಆದರೆ ದೂರದಲ್ಲಿ ಯಾರೋ ಓಡಿ ಬರುತ್ತಿರುವುದನ್ನು ಕಂಡಳು !

ತುಸು ಹತ್ತಿರ ಬಂದ ಕೂಡಲೇ ಅದು ಪ್ರಸನ್ನ ಅಂತ ಗೊತ್ತಾಯಿತು !

ಅರೆ... ಇವರೇಕೆ ಇಂತಹ ಅಪರಾತ್ರಿಯಲ್ಲಿ ಈ ರೀತಿ ಓಡಿ ಬರುತ್ತಿದ್ದಾರೆ? ನೋಡಿದರೆ ಯಾರಿಗೋ ಹೆದರಿಕೊಂಡು ಓಡಿ ಬರುವಂತೆ ಕಾಣುತ್ತಿದೆ.

ಪ್ರಸನ್ನ ಮರೆಯಾಗಿ ಹೋದನು. ಆದರೆ ಮತ್ತೊಂದು ವ್ಯಕ್ತಿ ಓಡಿ ಬರುತ್ತಿರುವುದು ಕಂಡಿತು !

ರೇವತಿ ಬೆಚ್ಚಿ ಬಿದ್ದಳು !

ಆ ವ್ಯಕ್ತಿ ವೀರಭದ್ರ ! ಹುಚ್ಚ ಅಂತ ಎಲ್ಲರೂ ತಿಳಿದಿದ್ದ ವೀರಭದ್ರ ಪ್ರಸನ್ನನನ್ನು ಓಡಿಸಿಕೊಂಡು ಹೋಗುತ್ತಿದ್ದಾನೆ. ಪ್ರಸನ್ನ ಅಪಾಯದಲ್ಲಿದ್ದಾನೆ !

* * *

ವೀರಭದ್ರ ಗಕ್ಕನೆ ನಿಂತನು !

ತನ್ನ ಎದುರಿಗೆ ನಿಂತಿರುವ ಅಪರಿಚಿತ ವ್ಯಕ್ತಿಯನ್ನು ಕಂಡು ಕೋಪ, ಆವೇಶದಿಂದ ಅಬ್ಬರಿಸುತ್ತಾ "ಏ... ಯಾರೋ ನೀನು? ನನ್ನನ್ನು ಯಾಕೆ ತಡೆದು ನಿಲ್ಲಿಸಿದ್ದೀಯ?"

ಮಾತು ಮುಗಿಯುವ ಮುನ್ನ ಪ್ರಹಾರ!

ಅಪರಿಚಿತನ ಮುಷ್ಠಿ ಪ್ರಹಾರ !

ಅನಿರೀಕ್ಷಿತ ! ವೀರಭದ್ರ ತೂರಾಡುತ್ತಿರುವಾಗಲೇ ಅಪರಿಚಿತ ಚಂಗನೆ ನೆಗೆದು ಕತ್ತಿನ ನರದ ಮೇಲೆ ಹೊಡೆದನು !

ವೀರಭದ್ರನ ತಲೆ 'ಧೀಂ... ಎಂದಿತು !

ಕಣ್ಣುಗಳ ಮುಂದೆ ಚಕ್ರ ತಿರುಗುತ್ತಿದೆ !

ತೂರಾಡುತ್ತಾ ನೆಲಕ್ಕೆ ಬಿದ್ದನು

**19ನೇ ಪುಟಕ್ಕೆ**

ಇಲ್ಲಿಯವರೆಗೆ.........

ಎಡತೊರೆಯ ಬಂಗಲೆಯಲ್ಲಿ ವೀರಭದ್ರ ತನ್ನ ಸಹೋದರನನ್ನು ಸಾಯಿಸಲು ಬಂದಿರುತ್ತಾನೆ. ಮೂಲ ನಿಧಿಯನ್ನು ಯಾವ ರೀತಿ ಅಪಹರಿಸಿದೆವು ಅಂತ ತಿಳಿಸುತ್ತಾನೆ. ಪ್ರಸನ್ನ ಈ ನಿಧಿಯನ್ನು ಸರ್ಕಾರಕ್ಕೆ ಒಪ್ಪಿಸಿದ್ದಾನೆ ಎಂದು ತಿಳಿದ ಕೂಡಲೇ ವೀರಭದ್ರ ಕೋಪದಿಂದ ಹುಚ್ಚನಾಗುತ್ತಾನೆ. ಪ್ರಸನ್ನನನ್ನು ಸಾಯಿಸಲು ಪ್ರಯತ್ನಿಸುತ್ತಾನೆ.

ಮುಂದೆ ಓದಿ..........

ನಿತ್ಯ ದುಃಖಿಗೆ ಏಳಿಗೆ ಇಲ್ಲ

## ಸಂಗಾತಿ ಭವಿಷ್ಯ : ಸೆಪ್ಟಂಬರ್ 1 ರಿಂದ 15, 2000

ಜೋತಿಷ್ಯರು : ಗಿರೀಶ್‌ಕುಮಾರ್, ಕೊಯನಾಡು

ಮೇಷ ರಾಶಿ : ದೈವಾನುಕೂಲವಿಲ್ಲ. ಸುಖ ಸಂತೋಷಗಳಿಗೆ ವಿಘ್ನಗಳು ಬಂದೊದಗಲಿದೆ. ಗೃಹ ವಲಯದಲ್ಲಿ ಕಲಹಗಳಿಗೆ ಆಸ್ಪದವಿದೆ. ದೂರದ ಬಂಧುಗಳಿಂದ ಮಾನಸಿಕ ವ್ಯಥೆ ಉಂಟಾದೀತು.

ವೃಷಭ ರಾಶಿ : ದೇಹದಲ್ಲಿ ಆರೋಗ್ಯವು ಹದಗೆಡುವುದು. ಗೃಹ ವಲಯದಲ್ಲಿ ನಷ್ಟ ನಿಷ್ಟುರಗಳು ಬರುವುದು. ಶನಿಯ ಆರಾಧನೆಯಿಂದ ಸುಖ.

ಮಿಥುನ ರಾಶಿ : ಉದ್ಯೋಗ, ವ್ಯವಹಾದಲ್ಲಿ ನಷ್ಟ, ಹಣಕಾಸಿನ ವ್ಯವಹಾರದಲ್ಲಿ ಧಕ್ಕೆ ಉಂಟಾದೀತು. ಪ್ರಯಾಣಕ್ಕೆ ಸೂಕ್ತ ಕಾಲವಲ್ಲ. ಕುಲದೇವತಾರಾಧನೆ ಮಾಡಿ.

ಕರ್ಕಾಟಕ ರಾಶಿ : ದೈವಾನುಕೂಲವಿಲ್ಲ. ಉದ್ಯೋಗ ವ್ಯವಹಾರದಲ್ಲಿ ಖರ್ಚು, ವೆಚ್ಚುಗಳು ಹೆಚ್ಚಾಗುತ್ತದೆ. ಹೊಸ ಮಿತ್ರರ ಸಹಕಾರದಿಂದ ಮನಸ್ಸಿಗೆ ನೆಮ್ಮದಿ

ಸಿಂಹ ರಾಶಿ : ದೈವಾನುಕೂಲವಿದೆ. ದೇಹ ಸಂಬಂಧವಾಗಿ ರೋಗಗಳು ಉಪಶಮನವಾಗಲಿದೆ. ಆದರೆ ಗೃಹವಲಯದಲ್ಲಿ ಕಲಹಗಳು ತಪ್ಪಿದ್ದಲ್ಲ. ದೇವತಾರಾಧನೆ ಮಾಡಿಕೊಂಡು ಬನ್ನಿ.

ಕನ್ಯಾ ರಾಶಿ : ವ್ಯಾಪಾರದಲ್ಲಿ ಲಾಭವಿದೆ. ಉದ್ಯೋಗದಲ್ಲಿ ಪ್ರಗತಿ ಹೊಂದುವಿರಿ. ಶತ್ರುಗಳು ಮಿತ್ರರಾಗುವರು. ಗೃಹ ವಲಯದಲ್ಲಿ ನೂತನ ಕಾರ್ಯ ಏರ್ಪಡಲಿದೆ. ಸಂಚಾರದಿಂದ ಮನಸ್ಸಿಗೆ ನೆಮ್ಮದಿ ಇಲ್ಲ.

ತುಲಾ ರಾಶಿ : ಶತ್ರುಗಳು ಮಿತ್ರರಾಗುವರು. ಗೃಹ ವಲಯದಲ್ಲಿ ಮಂಗಳ ಕಾರ್ಯ ಏರ್ಪಡುವುದು. ಹೊಸ ಮಿತ್ರರ ಬೇಟೆಯಿಂದ ಮಾನಸಿಕ ವ್ಯಥೆ ದೂರಾಗುವುದು. ಆರೋಗ್ಯ ಉತ್ತಮ ಗೊಳ್ಳುವುದು. ದೇವತಾರಾಧನೆ ಮಾಡಿ.

ವೃಶ್ಚಿಕ ರಾಶಿ : ಗೃಹವಲಯದಲ್ಲಿ ಕಲಹವೇರ್ಪಡುವ ಸಂಭವವಿದೆ. ಉದ್ಯೋಗದಲ್ಲಿ ಸಾಧಾರಣ ಪ್ರಗತಿ. ವಾಹನದಿಂದ ನಷ್ಟ ಅನುಭವಿಸುವಿರಿ.

ಧನಸ್ಸು ರಾಶಿ : ಉದ್ಯೋಗದಲ್ಲಿ ಸ್ವಲ್ಪ ಮಟ್ಟಿಗೆ ನೆಮ್ಮದಿ. ಶತ್ರುಗಳು ಕಿರುಕುಳ ತಪ್ಪಿದ್ದಲ್ಲ. ಮಿತ್ರರ ಬೇಟೆಯಿಂದ ಹೊಸ ಅನುಭವ. ವಾದ ವಿವಾದಗಳಿಗೆ ಆಸ್ಪದ ಕೊಡಬೇಡಿ.

ಮಕರ ರಾಶಿ : ದೇವತಾನುಗ್ರಹವಿದೆ. ವ್ಯವಹಾರ ಉದ್ಯೋಗದಲ್ಲಿ ಸ್ವಲ್ಪ ನೆಮ್ಮದಿ. ಶತ್ರುಗಳ ಜೊತೆ ವ್ಯವಹಾರ ಬೇಡ. ಗೃಹ ವಲಯದಲ್ಲಿ ಹೊಸ ಕೆಲಸ ಕೈಗೊಳ್ಳುವುದರಿಂದ ಮನಸ್ಸಿಗೆ ನೆಮ್ಮದಿ.

ಕುಂಭ ರಾಶಿ : ದೇಹದಲ್ಲಿ ಆರೋಗ್ಯವು ಸುಧಾರಿಸುವುದು. ನೂತನ ಕಾರ್ಯದಿಂದಾಗಿ ನೆಮ್ಮದಿ. ಬಿಡುವಿಲ್ಲದ ವ್ಯವಹಾರ. ಗೃಹ ವಲಯದಲ್ಲಿ ದೇವತಾ ಕಾರ್ಯಗಳು ನೆರವೇರುವುದು.

ಮೀನ ರಾಶಿ : ಗೃಹ ವಲಯದಲ್ಲಿ ಸ್ವಲ್ಪ ಮಟ್ಟಿಗೆ ನೆಮ್ಮದಿ ಮನಸ್ಸಿನಲ್ಲಿರುವ ವ್ಯಥೆಯನ್ನು ದೂರ ತಳ್ಳುವುದರಿಂದ ನಡೆಯುವ ದಾರಿಗೆ ಸುಗಮ. ದೇವತಾರಾಧನೆ ಮಾಡಿ.

---

## ನೈಟಿ...... ಎಲ್ಲಿರುವೆ?

ನೈಟಿ ನೈಟಿ ನೀನೆಲ್ಲಿರುವೆ?
ಎಲ್ಲಿ ನೋಡಿದರು ನೀನಲ್ಲಿರುವೆ.
ಹಗಲಲ್ಲಿರುವೆ ಇರುಳಲ್ಲಿರುವೆ
ಹೆಂಗಳೆಯರ ಮೈಯನುಮುಚ್ಚಿರುವೆ.
ಹೆತ್ತ ಬಾಣಂತಿಯರ ಮೇಲೂ ಇರುವೆ.
ಕುತ್ತು ಬಂದವರ ಮೈಯಲ್ಲಿರುವೆ
ಬಡವ ಕನ್ನಿಕೆಯರ ಮೇಲೂ ಇರುವೆ
ಸಿರಿ ಸಂಪನ್ನಿಕೆಯರ ಮೇಲೂ ಕುಣಿವೆ
ಸೀರೆ ಸುತ್ತಲಾರದ ವೃದ್ಧ ಮಹಿಳೆಗೂ
ಎದ್ದು ನಡೆಯಲಾರದ ಬಿದ್ದ ರೋಗಿಗೂ
ಶೋಕಿ ಮಾಡಿ ತಿರುಗುವ ಶೋಕಿ ಹುಡುಗಿಗೂ
ಎಲ್ಲರಿಗೂ ನೀನೇ ಆಧಾರ ನೈಟಿ, ನೈಟಿ, ನೈಟಿ.
ರಾತ್ರಿಯುಡುಗೆಯಾದರೂ ಹಗಲಲ್ಲಿರುವೆ
ಪರದೇಶದ ಫ್ಯಾಷನ್ ಆದರೂ ನಮ್ಮಲ್ಲಿರುವೆ
ದೇಶ ವಿದೇಶಗಳ ಸುತ್ತಿ ಬಂದಿರುವೆ
ಜಗದ ತುಂಬೆಲ್ಲ ನೀನೇ ತುಂಬಿರುವೆ
ನೈಟಿ, ನೈಟಿ, ನೈಟಿ.

ಕೆದಂಬಾಡಿ ಪುಷ್ಪಾ ತಿಮ್ಮಯ್ಯ
ಕುಂದಚೇರಿ.

ಕೊಡಗು ಸಂಗಾತಿ, ಪಾಕ್ಷಿಕನ್ನ ತಕ್ಕಂಡೊದಕು

---

ನಾಲಿಗೆ ಒಳ್ಳೆಯದಾದರೆ ನಾಡೆಲ್ಲಾ ಒಳ್ಳೆಯದು

# ಜನನ ಪರಿಸರ

ಪುರುಷ ಎಂದರೆ ವ್ಯಕ್ತಿ ವ್ಯಕ್ತಿಗಳಲ್ಲಿ ಉತ್ತಮನೆ ಪುರುಷೋತ್ತಮನು. ಆತನೇ ಪರಮಾತ್ಮನು. ಆತನೇ ಜಗದ್ಗುರು. ಪರಮಾತ್ಮನೆ ತನ್ನ ಮಾಯಾಶಕ್ತಿಯ ಮೂಲಕ ಸಕಲ ಚರಾಚರ ಜೀವಿಗಳನ್ನು ನಿರ್ಮಿಸುವನು. ಕ್ಷರ ಎಂದರೆ ನಾಶವಿರುವುದು ನಾಶವಿಲ್ಲದ್ದಕ್ಕೆ ಅಕ್ಷರ ಎನ್ನುತ್ತೇವೆ. ಇಂತಾ ಅಕ್ಷರ ಮಾಲೆಯನ್ನು ನಾವು ಕಲಿಯಬೇಕು

ಮಾನವ ಜನನ ದೇವರ ಒಂದು ಅದ್ಭುತ ಪವಾಡ. ನಾವು ಸಂತಾನದ ವಿಷಯದಲ್ಲಿ ಮಾತನಾಡುವಾಗ ಸಂತಾನಕ್ಕೆ ಕಾರಣ ಗಂಡು ಹೆಣ್ಣಿನ ಮಿಲನ ಎಂದಿಷ್ಟೇ ಅರಿತಿರುವುದು. ಸ್ವಲ್ಪ ಆಳವಾಗಿ ನೋಡುವ. ಸಂದರ್ಭಕ್ಕಾಗಿ ಒಂದು ಗರ್ಭ (ತಾಯಿ) ಸಂದರ್ಭ ಕ್ಕೊಂದು ಗುಳ್ಳೆ(Atom) ಅದೇ ಜನನದ ಆದಿ. 7ದಿನಗಳ ವರೆಗೆ ಇದೊಂದು ಗುಳ್ಳೆ. ಅದೇ ಗುಳ್ಳೆ 15 ದಿನದಲ್ಲಿ ಎಂಬ್ರಿಯೋ (Embryo) ಅಂದರೆ ಗರ್ಭದಲ್ಲಿ ಮೂಲ ಅವಸ್ಥೆಯ ಜೀವ ವಸ್ತು. ಶಿಶುವಿನ ಭ್ರೂಣದ ಆರಂಭದ ಅವಸ್ತೆ. ಅದೇ 30 ದಿನದಲ್ಲಿ foetus. ಅಂದರೆ ಬೆಳೆದ ಗರ್ಭ, ಭ್ರೂಣ. 60ದಿನದಲ್ಲಿ ತಲೆಯ ಆಕಾರ ಸುರು. 210 ದಿನದಲ್ಲಿ Foetus quitenis life ಅಂದರೆ 210 ದಿನದಲ್ಲಿ ಜೀವ ತುಂಬಿಸುವುದು. 240 ದಿವಸದಲ್ಲಿ ಪೂರ್ಣ ಶರೀರ. ಹೆಚ್ಚು ಕಡಿಮೆ 270 ದಿನದಲ್ಲಿ ಗುಳ್ಳೆ ಮಗುವಾಗಿ ಹೊರಬರುವುದು. ಅಂದರೆ ನಮ್ಮ ಆಯುಷ್ಯ ನಮ್ಮ ಈ ಗಿರುವ ಲೆಕ್ಕಕ್ಕಿಂತ 270 ದಿವಸ ಸೇರಿಸಿಕೊಳ್ಳಬೇಕು, ಗರ್ಭದಲ್ಲಿ ಮೂಲ ಅವಸ್ತೆ ಇರುವಾಗಲೇ ಮಗು ಮಾನಸಿಕ ಪರಿವರ್ತನೆಗೆ ಶುರುವಾಗುತ್ತದೆ. ನಮ್ಮ ಜನಾಂಗ ಉತ್ತಮವಾಗಿ ಬೆಳೆಯಲು ಬೆಳೆಸಲು ಸರಿಯಾದ ಮಾರ್ಗ ಗರ್ಭದಿಂದಲೇ ಬರಬೇಕು.

ಗರ್ಭಿಣಿ ಎಂದರೆ ಅದೊಂದು ಪವಿತ್ರತೆ. ಪೂಜ್ಯಭಾವ ವಿರಬೇಕು. ಮುಂದಿನ ಪೀಳಿಗೆಗೆ ಆದಿ. ಮಾನವನ ಮಾನವೀಯತೆ ಗರ್ಭದ 3 ತಿಂಗಳಿಂದಲೇ ಶುರುವಾಗುವುದು. ಗ್ರಹಣ ಶಕ್ತಿ, ಆಲೋಚನಾಶಕ್ತಿಯ ಪ್ರಾರಂಭ. ಇದು ವಿಚಿತ್ರವೆಂದೆನಿಸಿದರೂ ಸತ್ಯ. ಸುಭದ್ರೆಯ ಗರ್ಭದಲ್ಲಿದ್ದ ಮಗು (ನಂತರ ಅಭಿಮನ್ಯು) ಕೃಷ್ಣ ಸುಭದ್ರೆಯರ ಸಂಭಾಷಣೆಯನ್ನು ಆಲಿಸುತ್ತಿದ್ದದ್ದು ಮೂಢನಂಬಿಕೆ ಅಲ್ಲ. ಪರಿಪೂರ್ಣ ಜ್ಞಾನ.

ಆದ್ದರಿಂದ ಯಾವಾಗ ತಾಯಿ ಗರ್ಭವತಿಯೆಂದು ತಿಳಿದು ಬಂದಿತೋ ಅಂದಿನಿಂದಲೇ ಹೆಂಡತಿ ಎಂಬ ಪದದಿಂದ ಮಾತೆಯೆಂಬ ಖ್ಯಾತಿಗೆ ಕಾಲಿಡುತ್ತಾಳೆ. ನಮ್ಮ ಯುವ ಜನ ನಿರ್ಮಾಣ, ಜನಾಂಗ ಪರಿಸರ ಇಲ್ಲಿಂದಲೇ ಪ್ರಾರಂಭ. ಪರಿಸರ ರಕ್ಷಣೆ ಇಲ್ಲಿಂದಲೇ ಪ್ರಾರಂಭ. ಪರಿಸರ ಎಚ್ಚರಿಕೆ ಇಲ್ಲಿಂದಲೇ. ಒಂದು ಕುಟುಂಬದಲ್ಲಿ ಗರ್ಭವತಿ ಇದ್ದರೆಂದರೆ ಆ ಕುಟುಂಬದ ಮನೆಯ ವಾತಾವರಣ ಬದಲಾಗಬೇಕು. ಅದೊಂದು ಗರ್ಭಗುಡಿ ಆಗಬೇಕು. ಇದಕ್ಕೆ ಗಂಡ ಹೆಂಡಿರು, ಸಂಸಾರದವರು ತಮ್ಮ ಸ್ವಭಾವ, ವರ್ತನೆ, ಮಾತಿನ ಮೋಡಿ ಇವುಗಳನ್ನು ಖಡ್ಡಾಯವಾಗಿ ಪರಿವರ್ತನೆ ಪಡಿಸಿಕೊಳ್ಳಬೇಕು. ಹೊಟ್ಟೆಯಲ್ಲಿ 3 ತಿಂಗಳ ನಂತರ ಹೆಂಗಸಿನ ದೇಹ ಸ್ಥಿತಿಯಲ್ಲಿ ಮಹತ್ತರ ಪರಿವರ್ತನೆ ಅಥವಾ ಬದಲಾವಣೆ ಆಗುತ್ತಾ ಹೋಗುತ್ತದೆ. ಗರ್ಭವತಿಯ ಮಾನಸಿಕ ಆಲೋಚನೆಯನ್ನು ಮಗು ಗ್ರಹಿಸುತ್ತಿರುತ್ತದೆ. **ಆದ್ದರಿಂದ ಗರ್ಭವತಿಯರು ಮೊಟ್ಟ ಮೊದಲು ತಮ್ಮ ಮಾನಸಿಕ ಆರೋಗ್ಯವನ್ನು ಕಾಪಾಡಿಕೊಳ್ಳಬೇಕು.** ಗರ್ಭದ 3 ತಿಂಗಳವರೆಗೆ, 6 ತಿಂಗಳವರೆಗೆ, 10 ವರ್ಷದವರೆಗೆ ತಾಯಿಯು ಮಗುವಿನ ಸರ್ವತೋಮುಖ ಬೆಳವಣಿಗೆಗೆ ಅಡಿಪಾಯ.

ಈ ಸಂದರ್ಭದಲ್ಲಿ ಗಂಡ ಹೆಂಡಿರ, ಸಂಸಾರದಲ್ಲಿ ಅಸಭ್ಯ ವರ್ತನೆ, ಧೂಮಪಾನ, ಸರಾಯಿ ಸಹವಾಸ, ಡ್ರಗ್ಸ್ ಸೇವನೆ ನಿಷೇಧಿಸಬೇಕು. ಅದು ಖಡ್ಡಾಯ ಎಷ್ಟು. ಕೆಟ್ಟ ಗುಣಗಳನ್ನು, ಮೋಸ, ವಂಚನೆಗಳನ್ನು ಅನುಸರಿಸುತ್ತೇವೋ ಅಷ್ಟೇ ಕಂಟಕ ಪ್ರಾಯವಾಗಿ ಶಿಶು ಜನನವಾಗುತ್ತದೆ. ತಾಯಿಯ ಗರ್ಭದಲ್ಲಿ ಮಗುವಿರುವಾಗ ಅಸಂಖ್ಯಾತವಾಗಿ ಸಿಹಿ ಪದಾರ್ಥವನ್ನು ತ್ಯಜಿಸಬೇಕು. ಸೇಂದಿ ಸರಾಯಿ ಸಹವಾಸವಿರಬಾರದು. ಮನಸ್ಸಿನ ಪವಿತ್ರತೆಯನ್ನು ಕಾಪಾಡಿಕೊಳ್ಳಬೇಕು. ಮನಸ್ಸು ಸುಸ್ಥಿತಿಯಲ್ಲಿರ ಬೇಕು. ಸಾಧ್ಯವಿದ್ದಷ್ಟು ಒಳ್ಳೆಯ ಪುಸ್ತಕ ಓದಬೇಕು. ಇಲ್ಲವೇ ಕೇಳಬೇಕು. ವೀರಕಥೆ, ಗೀತಾ ಪಠಣ ವಿಜ್ಞಾನದ ತಿರುಳು, ದೇವತಾಕಾರ್ಯ, ದೇಶಕಾರ್ಯ, ಶಿಸ್ತಿನ ಆಡಂಬರ ಮುಂತಾದ್ದನ್ನು ಯೋಚಿಸಬೇಕು. ಕೇಳಬೇಕು. ಗರ್ಭವತಿ ಮನೆಯಲ್ಲಿರುವಾಗ ಕೆಟ್ಟ ಶಬ್ದ, ಕೆಟ್ಟ ಬೈಗಳನ್ನು ಆಡಬಾರದು. ನಾವು ಏನನ್ನೇ ಮಾಡಲಿ, ಆಡಲಿ, ಯೋಚಿಸಲಿ ಅದು ಗರ್ಭದಲ್ಲಿರುವ ಮಗುವಿನ ಮೇಲೆ ಪರಿಣಾಮ ಬೀರುವುದು. ತಪ್ಪಿದರೆ ಕೆಟ್ಟ ಬುದ್ಧಿಯ ಮಕ್ಕಳಿಗೆ ನಾವೇ ಹೊಣೆಗಾರರಾಗುತ್ತೇವೆ. ಮಗು ರೋಗ ರಹಿತ, ದಷ್ಟಪುಷ್ಟಿಯಲ್ಲಿರಬೇಕಾದರೆ ತಾಯಿಯಾಗುವವಳು ಒಳ್ಳೆ ಆಹಾರ, ವ್ಯಾಯಾಮ, ಗಾಳಿ ಸೇವನೆ, ಶುದ್ಧ, ಸ್ವಚ್ಛ ಆಹಾರ, ನೀರು, ಗಾಳಿ, ಮನಸ್ಸು ಸ್ವಚ್ಛವಾಗಿರಬೇಕು.

ಇಂದು ನಾವು ಪರಿಸರ ನಾಶದ ಬಗ್ಗೆ ಉದ್ದುದ್ದ ಭಾಷಣ, ಹೇಳಿಕೆಗಳನ್ನು ಕೊಡುತ್ತೇವೆ. ನನ್ನ ಅನಿಸಿಕೆಯಲ್ಲಿ ಪ್ರಾಮುಖ್ಯವಾದ ಪರಿಸರ ನಾಶ ನಮ್ಮ ಮುಂದಿನ ಯುವ ಪೀಳಿಗೆ. ನಾವು ಇಂದು ನಮ್ಮ ಮಕ್ಕಳನ್ನು ಗರ್ಭದಿಂದಲೇ ತಿದ್ದದೆ ಹೋದರೆ ವಂಶವೇ ನಾಶ. ಪ್ರತೀ ತಂದೆ ತಾಯಿಗಳು, ಹಿರಿಯರು ಇದರ ಬಗ್ಗೆ ಆಲೋಚಿಸಿ ಮುಂದಿನ ಪೀಳಿಗೆಯನ್ನು ರಕ್ಷಿಸಿ.

**ಚೇಂದ್ರಿಮಾಡ ಗ. ಮುತ್ತಪ್ಪ, ಕುಶಾಲನಗರ.**

---

## ನಗೆಹನಿ

ರಾಜ : (ಗೆಳೆಯನ ಕುರಿತ್) ಏನ್ರ ನೀನ್ ಹೆಣ್ಣ್ ನೊಟ್ಟಿಗೆ ಸೂರ್ಯ ಚಂದ್ರ ಇರಾಮಟ್ಟ ಡೈವರ್ಸ್ ಮಾಡ್ಲೆತ ಭಾಷೆ ಕೊಟ್ಟ್ ಬುಟ್ ಈಗ ದೂರ ಮಾಡಿಬುಟ್ಟಗಡ

ಗೆಳೆಯ : ಹ್ವೊ ! ಅದಾ ವಿಷಯ ನಾನು ಅವಳ ಬುಡ್‌ಕನ ಚಂದ್ರನೂ ಇತ್ಲೆ ಸೂರ್ಯನು ಇತ್ಲೆ. ಆಗ ಸೂರ್ಯಂಗೆ ಗ್ರಹಣ ಹಿಡಿದಿತ್.

ಎಮ್ಕೆ.

---

# ವಾಂಟೆಡ್ ಮಿಸ್ಟರ್ ರಾಜು [ನಮ್ಮ ರಾಜು ಮಂಜನ ಕಥೆ]

ಲೇಖನ : ಶಂಕರನ ಬಸಪ್ಪ

ಧಾರಾವಾಹಿ -17

ಹಿಂದೆ ನಡವದ್.......

Mr ರಾಜು ಕಪಟ ಸನ್ಯಾಸಿನ ವೇಷ ಹಾಕಂಡ್ ಲಾಟರಿಲಿ ಹಣ ಸಿಕ್ಕುವಂಗೆ ಆಶೀರ್ವಾದ ಮಾಡ್‌ತ್. ಕೂರ್ಗಳ್ಳಿ ರಸ್ತೆಲಿ ರಾತ್ರಿ ಹೊತ್ತ್ ಟ್ರಾಫಿಕ್ ಪೋಲಿಸ್ ತರ ನಿಂತ್‌ಕಂಡ ಹೋಗೋಬರುವ ಲಾರಿಗಳ ಅಡ್ಡಹಾಕಂಡ್ ಹಣ ಸಂಪಾದಿಸಿತ್. ಒಬ್ಬರೋಗಿಗೆ ಬೇಕಾದ ರಕ್ತನ ಕೊಟ್ಟಿತ್. ಹಂಗೇ ಅರಮನೆ ಗೇಟ್ ಮುಂದೆ ಕುದ್ದಿದ ಬಿಕ್ಷುಕರ ದೋಚುವ ಒಬ್ಬ ರೌಡಿಗೆ ಹೊಡ್ಡ್ ಬುದ್ದಿ ಕಲ್ಸಿತ್...

ಮುಂದಕೆ...........

ಈ ದಿನ ಮಂಗಳವಾರ ಅಂಥದೇನೂ ಶುಭದಿನ ಅಲ್ಲ. ಆದ್ರೂ ಶ್ರಮಜೀವಿ ಗಳಿಗೆ ಯಾವದಿನ ಯಾವ ಘಳಿಗೆ ಆದ್ರೆ ಏನ್? ಪ್ರತೀ ಒಂದು ಬರತಕ್ಕ ಘಳಿಗೆನೂ ಒಳ್ಳೆದೆ. ಆದ್ರ ನಾವ್ ಬೇಕಾದಂಗೆ ಉಪಯೋಗ್ಸಿಕಂಡ್ ಒಳ್ಳೆ ಕೆಲ್ಸಮಾಡಿರೆ ಒಳ್ಳೆದೇ ಆದೆ! ತಾ Mr. Raju ಗ್ಯಾನ ಮಾಡಿಕಂಡ್, ಇಂದ್ ಎಲ್ಲಿಗೂ ಹೊಡ್ಡಾಡಿಕೆ ಹೋಕಾಗದ್ ಏನೂ ಮೈಕೈ ಮಿಸ್‌ಕಾಡದಂಗೆ ಇಂದ್ ಸಂಪಾದನೆ ಆಕು. ಆ ತರದ ದಾರಿ ತೋರ್‍ಸಿಕೊಡು ನನ್ನ ಗುರುವೇತ್ತೇಳಿಕಂಡ್ ನೀಟಾಗಿ ಮೊಖಕ್ಕೆ ಪೌಡರ್ ಸ್ನೋ ಬಳಕಂಡ್, ಒಂದು ಉದ್ದದ ಗಡ್ಡನ ಅಂಟಿಸಿ ಕಂಡತ್. ತಲೆಗೆ ಸಾಬಿಗಳ ರೌಂಡ್ ಬಿಳಿ ಟೋಪ್ಪಿನ ಹಾಕಂಡತ್. ಒಂದು ಉದ್ದಕೈ ಜುಬ್ಬ, ದೊಗಳೆ ಬಿಳಿ ಪೈಜಾಮ ಹಾಕಂಡತ್. ಕಾಲಿಗೆ ಲೇಸ್ ಇಲ್ಲದ ಸಾಕ್ಸ್ ಕಪ್ಪು ಶೂವ್‌ನ ಮೆಟ್ಟಿಕಂಡತ್. ಈಗ ನೋಡಿಕೆ Mr. Raju ಒಬ್ಬ ತುರ್ಕಕುಟ್ಟಿ ಒಬ್ಬ ನಿಯತ್ತಾದ ಮುಸ್ಲಿಮ್ ಹೈದ ನಂಗೆ ಕಾಂಬೊತಿತ್ತ್.

ಮೆಲ್ಲಂಗೆ ಲಾಡ್ಜಂದ ಹೊರಟಂವ ಅಲ್ಲೇ ಅಶೋಕ ರೋಡ್‌ನ ಪಕ್ಕದ ಸಂದಿಲಿ ಒಂದ್ ಚಾಯವಾಲನ ಅಂಗಡಿಗೆ ಹೋಗಿ ಕುದ್‌ಕಂಡತ್. ತನ್ನ ಮಾಮೂಲಿ ಚಾಳಿಪ್ರಕಾರ ಅಂವ ಕೊಟ್ಟ ಚಾ ಹೀರ್‌ತಾ ಅಂದಿನ ದಿನ ಪತ್ರಿಕೆ ಮೇಲೆಲ್ಲಾ ಕಣ್ಣಾಡಿಸಿಕೆ ಶುರ್ ಮಾಡ್‌ತ್. ಆದ್ರೇ ಇಂದ್‌ನ ಪೇಪರ್‌ಲಿ, ರಕ್ತದಾನ, ನೇತ್ರದಾನ, ಕಿಡ್ನಿದಾನ ತ ಯಾವುದೂ ವಿಶೇಷನ ಕಂಡತ್‌ಲೆ. ಓಹೋ ಕಿಡ್ನಿದಾನ., ಒಂದ್ ಕಿಡ್ನಿಗೆ 25,000 ರೂಪಾಯಿ ಕೊಟ್ಟುವೆಗಡತ್ತೇಳಿ Mr. Raju ಗೆ ಕಳೆದ ತಿಂಗ ಯಾರೋ ಒಬ್ಬ ಹೇಳಿದ್ದೊ. ಅದರ ಗ್ಯಾನ ಆಗಿ ಒಮ್ಮೆ Mr. Rajuಗೆ ಬಹಳ ಖುಷಿ ಆಗಿ ಒಮ್ಮೆ ತನ್ನ ಕಣ್‌ನ ಜೋರಾಗಿ ಅರಳಿಸಿತ್. ಅಷ್ಟೊತ್ತಿಗೆ ಇನ್ನೊಂದ್ ತರದ ಗ್ಯಾನ ತಲೆ ಒಳಗೆ ಹೊಕ್ಕತ್. ನಾನ್ ಸುಮ್ಮ ಸುಮ್ಮನೆ ಕಿಡ್ನಿ ಕೊಟ್ಟನೆ ತೇಳಿ ಹೊದ್ರೆ ಅದ್‌ಕ್ಕೆ ಸರಿಯಾದ ಬೆಲೆ ಸಿಕ್ಕುದಿಲ್ಲೆ. ಯಾರಿಗಾದ್ರೂ ಅರ್ಜೆಂಟಾಗಿ ಬೇಕಾಕನ ಕೊಟ್ರೆ ನೀವು ಒಂದ್ ಕಿಡ್ನಿಗೆ ಇಷ್ಟೇ ಕೊಡಕ್ಕುತ್ತೇಳಿ ಹಣ ಕಿತ್‌ಕಣಕ್. ಈಗ ನನ್ನ ಹಣಕ್ಕೋಸ್ಕರ ಡಾಕ್ಟರ್ ಹತ್ರ ಹೋಗಿ ಹೇಳಿರೆ ಆ ಖದೀಮರ್ ನನ್ನ ಸೊಯ ತೊಪ್ಪಸಿ ಹೊಟ್ಟೆ ಕೊಯ್ದು 2 ಕಿಡ್ನಿನೂ ಕಿತ್‌ಕಂಡ್ ಮತ್ತೆ ಅಲ್ಲಿ ಕಿಡ್ನಿನೇ ಇತ್‌ಲೆ ತೇಳಿ ದಭಾಯಿಸಿ ಕಳುಹಿಸಿ ಬುಡುವೋ, ಇದೆಲ್ಲಾ ಮತ್ತೆ ನನ್ನ ಮುತ್ತಾಳ್ ತನದ ಕೆಲಸ ಆಗಿ ಹೋದು. ದೇವರೆ ಬೇಡಪ್ಪ ಈ ಡಾಕ್ಟರ್‌ಗಳ ಸಹವಾಸತ ಹಂಗೇ ಪೇಪರ್ ಪೂರ್ತ ನೋಡಿಕಾಕನ ಪೇಟೆಧಾರಣೆಗಳುತ ಒಂದ್ ಪಟ್ಟಿ ಇತ್. ರೆಗ್ಯುಲೇಟೆಡ್ (RMC) ಮಾರ್ಕೆಟ್‌ನ ಇಂದಿನ ಧಾರಣೆಗಳು : ಹತ್ತಿ, ಹುಣಸೆ, ಮೆಣಸು. ರಾಗಿ, ಬತ್ತ, ಜೋಳ, ಕಾಫಿ ಸೀಗೆಕಾಯಿ ಇಂತವುಗಳ ಹರಾಜಿನ ದರಗಳನ್ನ ಆ ಲಿಸ್ಟ್‌ಲಿ ಐಟಂವಾರ್ ಹಾಕಿದ್ದೊ. ರೆಗ್ಯುಲೇಟೆಡ್ ಮಾರ್ಕೆಟ್‌ತ Mr. Raju ಕಂಡಾಕ್ಷಣ Mr. Rajuಗೆ ಅಂವ ಮಾಡಿದ್ದ ಒಂದ್ ಹಳೇ ಕಾರ್‌ಬಾರ್ ಗ್ಯಾನ ಬಾತ್. ಎರಡ್ ವರ್ಷದ ಹಿಂದೆ ಇಂವ ಒಮ್ಮೆ ಊರಂದ ಹುಣಸೇ ಹಣ್ಣನ ಲೋಡ್‌ನ ಲಾರಿಲಿ ತಕ್ಕೊಂಡು ಹೋಗಿ ಅಲ್ಲಿ ಕಿತ್ ಹಾಕಿಸಿ ವ್ಯಾಪಾರ ಮಾಡಿಕಂಡ್ ಬಂದಿತ್. ಅದ್ರಲ್ಲಿ ಒಳ್ಳೆ ಲಾಭ ಸಿಕ್ಕಿದರಂದ ಆ ಲಾಭನ ಮನೇಲಿ ಅಪ್ಪಂಗೂ ಹೇಳದೆ 2ದಿನ ಮೈಸೂರ್‌ಲೇ ತಿರ್ಗಾಡಿ ಕಂಡ್ ಮಜ ಉಡಾಯಿಸಿ ಕಂಡ್‌ದ್ ಎಲ್ಲಾ ಗ್ಯಾನ ಬಾತ್. ಸರಿ ಅಲ್ಲಿಗೆ ಹೋಗಿ ಒಂದ್ ಸರ್ತಿ ನೋಡಿ ಕಂಡ್ ಬಂದರೆ ಅಲ್ಲಿ ಏನಾದರೂ ಛಾನ್ಸ್ ಸಿಗುತ್ತೇಳಿ ಹಂಗೆ ನೆಟ್ಟಂಗೆ ಸಯ್ಯಾಜಿ ರಾವ್ ರೋಡ್‌ಲೇ ನಡಕಂಡೆ ಆ R.M.C. ಮಾರ್ಕೆಟ್ ಕಡೆಗೆ ಹೊರಟತ್.

ಅಲ್ಲಿ ನೋಡಿಕೆ ಅದರೊಳಗೆ ತುಂಬಾ ಜನ ಬೇರೆ ಬೇರೆ ಹಳ್ಳಿಕಡೆಂದ ತರಾವರಿ ಕಾಳ್ ಕಡ್ಡಿ ದವಸ ಧಾನ್ಯಗಳ ಲೋಡ್ ಗಟ್ಟಲೆ ತಂದ್ ಮಾರಾಟ ಮಾಡಿಕೆ ಹಾಕಿದ್ದೊ. ತುಮಕೂರು, ಹಾಸನ, ಕೇರಳ, ಕೊಡಗು, ಹಿಂಗೇ ಏನೇನೋ ಐಟಂಗ ಬಂದ್ ಬಿದ್ದಿದ್ದೊ. ರಾಶಿ ರಾಶಿ ಲಾಯಕ್ಕಲಿ ಜೋಡಿಸಿ ಮಾರಾಟಕ್ಕೆ ಗುಡ್ಡೆ ಹಾಕಿದ್ದೊ. ದಳ್ಳಾಳಿಗಳೂ, ರೈತರುಗಳೂ ಅಲ್ಲಿ ಇಲ್ಲಿ ಪೇಪರ್ ಪೆನ್ ಹಿಡ್‌ಕಂಡ್ ಏನೇನೋ ಲೆಕ್ಕ ಹಾಕಂಡ್ ಸುತ್ತಾಡುತ್ತಿದ್ದೊ. ಒಂದೊಂದು ಐಟಂಗಳ ಬೆಲೆಗಳ ಒಳ್ಳೆ ಹಸನ್ ಮಾಲಿನ ಬೆಲೆ, ಸಾಮಾನ್ಯ ಮಾಲಿನ ಬೆಲೆಗಳನ್ನ ಬೇರೆ ಬೇರೆ ಆಗಿ ಮಾರ್ಕೆಟ್‌ನವು ಅಲ್ಲಿ ಮೈಕ್‌ಲಿ ಜೋರಾಗಿ ಹೇಳಿ ಅಲ್ಲಿದ್ದ ರೈತರಿಗೆ ತಿಳಿಸುತ್ತಿದ್ದೊ. ಈತರ ಬೆಳೆಗಾರರಿಗೂ ಖರೀದಿದಾರರಿಗೂ ಹೊಂದಾಣಿಕೆ ಮಾಡಿ ದಳ್ಳಾಳಿಗ ರೈತರ ಮಾಲಿಗೆ ತಕ್ಕ ಬೆಲೆ ಸಿಕ್ಕುವಂತೆ ಮಾಡುತಿದ್ದೊ. ಒಳ್ಳೆ ಬೆಲೆ ಸಿಕ್ಕಿತಿಲ್ಲೆಲತ್ತೇಳಿರೆ ಆರೈತರಿಗೆ ಮಾರನೆ ದಿನ ಕೂಡಾ ಅವರ ಮಾಲ್‌ನ ಅಲ್ಲೇ ಇಟ್ಟ್‌ಕಂಡ್ ಮಾರಾಟ ಮಾಡುವ ವ್ಯವಸ್ತೆ ಕೂಡಾ ಈ R.M.C.ಲಿ ಉಟ್ಟು. ಈ ಜನರ ಮಧ್ಯೆಲಿ

ನಮ್ಮ ಮುರ್ನಾಡ್ ಕಡೆಂದ ಮೇದಪಜ್ಜ ಒಂದ್ ಲೋಡ್ ಸೀಗೆಕಾಯಿ ತಂದ್ ಇಲ್ಲಿ ಅನ್‌ಲೋಡ್ ಮಾಡಿಕೆ ಲಾರಿನ ಒಂದ್ ಸೈಡ್‌ಲಿ ನಿಲ್ಸಿದೊ. ಇವರ ಕಂಡ ನಮ್ಮ Mr. Raju ಹೋಗಿ ಸಲಾಂ ಸಾಬ್ ಅಂತ ಹೇಳಿ ಆಪ್ ಮಡಿಕರಕೆ ಪಾಸ್ ಮೂರ್ನಾಡ್‌ಸೆ ಬಂದಿದ್ದು ಅಲ್ವಾ? ನಾನು ನಿಮುದಕ್ಕೆ ಮೊದಲು ಎಲ್ಲೋ ನೋಡಿದ ಜ್ಞಾಪನ ಇದೆ ಶಾಬ್, ನಂದುಕೆ ಹೆಸರು ಮಕಬುಲ್ ಪಾಸ, ಅಂತ ನಮ್ಮುದ ಪ್ಯಾಕ್ಟರಿಗೆ 2 ಲೋಡ್ ಶೀಗೆ ಕಾಯಿ ತೆಗೆದುಕೊಂಡು ಹೋಗೋಣಂತ ಬಂದೆ ಶಾಬು, ನಿಮ್ಮುದಕ ಏನ್ ಮಾಲು ತಂದಿದ್ದೀರಿ? ಶಾಬ್ ಅಂತ ಕೇಳ್ತ್. ಈ ಒಳ್ಳೆ ಪರಿಚಯ ಇದ ಜನರ ಮಾತಾಡಿಸಿದಂಗೆ ಈ ಜನ ನನ್ನ ಮಾತಾಡಿಸಿತಲ್ಲಾ ತಾ ಗ್ಯಾನ ಮಾಡಿಕಂಡ್ ಮೇದಪ್ಪಜ್ಜ ಹೇಳ್ವೊ ನಂದ್ ಒಂದ್ ಲೋಡ್ ಸೀಗೆಕಾಯಿ ಉಟ್ಟು. ಆದ್ರೇ ಪಾಶಾ ಸಾಬ್ ಇಲ್ಲಿ ನೋಡ್ರಿ ಯಾರೂ ಟನ್ನಿಗೆ 10,000ಕ್ಕಿಂತ ಮೇಲೆ ಕೇಳ್ತಾನೆ ಇಲ್ಲಲ್ಲಾ? ಇದರ ಮ್ಯಾಲೆ ಇವರ ಕಮಿಷನ್, ಮಾಮೂಲಿ ಕೂಲಿ "ಬಾರ್ದಾನ್" ವೇಸ್ಟ್ (ಅರೆವಾಸಿ) ಅಂತ ತೂಕ ಒಂದರ 5 kg ತೆಗ್ದವೆ. ಹಿಂಗಾದ್ರೆ ನನ್ನ ಕೈಗೆ 1¼ ಲಕ್ಷನೂ ಸಿಕ್ಕಿಕಿಲೆಲ್ಲಾ? ತಾ ಬೇಜಾರ್‌ಲಿ ಹೇಳಿಕಂಡೊ. ಮೇದಪ್ಪ ಶಾಬ್, ನೀವು ಯೋಚ್ನೆ ಮಾಡ್ ಬ್ಯಾಡಿ. ನಾನ್ ನಿಮ್ಮುದಕ್ಕೆ ಶೀಗೆ ಲೋಡಿಗೆ ಒಳ್ಳೆ ರೇಟ್ ಕೊಡ್ಸಿನೆ. ಕೂಲಿ, ಹಮಾಲಿ, ಕಮಿಷನ್ ತೂಕಲಿ ಮೋಸ ಯಾವುದೂ ಇರ್‍ದಲೆ. ನಮ್ಮ ಫ್ಯಾಕ್ಟರಿಗೆ ನಿಮ್ಮ ಲೋಡ್‌ನ ಹಾಕಿಸಿನೆ. ಒಟ್ಟು ಎಷ್ಟು ಉಟ್ಟ್ ಸೀಗೆ ಕಾಯಿತ ಕೇಳ್ತ್ ಒಟ್ಟು 12½ ಟನ್ ಉಟ್ಟು, ನಂಗೆ ಎಲ್ಲಾ ಖರ್ಚುಕಳ್ದ್ 12. ಟನ್‌ಗಾದ್ರೂ ಒಳ್ಳೆ ರೇಟ್ ಸಿಕೊಕು ಆತಾ? ತ ಅಜ್ಜ ಹೇಳ್ತ್. ಸರಿ ನೀವು ಇಲ್ಲೇ ಕಾಫಿ ಕುಡಿಯುತ್ತಿರಿ ನಾನ್ ಇಲ್ಲೇ ಸ್ವಲ್ಪ ಪಿಸಾಬ್ (ರೀಸಸ್) ಮಾಡಿಕಂಡ್ ಬನ್ನೆತ್ತೇಳಿ ಅಲ್ಲೇ ಒಂದ್ ಸಂದಿಗೆ ಪಾಶ ಶಾಬ್ ನುಗ್ತ್. ಪಾಶಾ ಶಾಬ್ S.T.D. ಬೂತ್‌ಗೆ ಹೋದಂವ. S.R.K Soapnut Works ನ ಸಾಹುಕಾರ Mr. ಸತ್ಯನಾರಾಯಣ ಶೆಟ್ಟಿಗೆ ಟೆಲಿಫೋನ್ ಮಾಡಿ ಸಾರ್ ನಾನು ಮಕ್‌ಬೂಲ್ ಪಾಶಾ ಮಾತಡುತಿರೋದು ನನ್ನ ಹತ್ರ ಒಂದು ಲೋಡ್ ಒಳ್ಳೆ ಸೀಗೆಕಾಯಿ ಉಟ್ಟು. ಒಳ್ಳೆ ಒಣ ಪುಡಿ ಐಟಂ ಮತ್ತೆ ಕಲರ್ ಕೂಡಾ ಒಳ್ಳೆ ಲಾಯಕಲಿ ಉಟ್ಟು ಇನ್ನೊಂದು ಲೋಡು ಮುಂದಿನ ವಾರ ರೆಡಿ ಆದೆ. ಈಗ ನೀವ್ ಹೆಂಗೆ ಕೊಟ್ಟುರೆ ಟನ್ನಿಗೆ? ನಂಗೆ 14000ನ್ನಾದ್ರೂ ರೇಟ್ ಸಿಕ್ಕೋಕು, ಹೆಂಗೆ ಲೋಡ್‌ನ ತರಲಾ ನಿಮಗೆ ತ್ತೇಳಿ ಕೇಳ್ತ್. ಇಲ್ಲಿ ಮಾರ್ಕೆಟ್‌ಲ್ಲೂ ಸೇಮ್ ರೇಟ್ ನಡೀತಾ ಉಟ್ಟು ತಾ ಒಂದ್ ಸಣ್ಣ ಬೆದರಿಕೆ ಹಾಕ್ತ್. ಒಂದ್ನಿಮಿಷ ಇರಿ ಪಾಶಾ ನಾನು ನಮ್ಮಲ್ಲಿ ಸ್ಟಾಕ್ ಎಷ್ಟು ಉಟ್ಟುತಾ ನೋಡಿ ಹೇಳ್ನೆ ತ್ತೇಳಿ ½ ನಿಮಿಷ ಬುಟ್ ಆ ಕಡೆಂದ ಸಾಹುಕಾರ ಸತ್ಯನಾರಾಯಣ ಶೆಟ್ಟಿ ಹೇಳ್ವೊ. ಆತ್ ಆ ಲೋಡ್‌ನ ತಕೊಂಡು ಬನ್ನಿ ಆದ್ರೆ ಟನ್ನಿಗೆ ಒಂದುಕಾಲು ಸಾವಿರದಂಗೆ ಲೆಕ್ಕ ಹಾಕಿನೆ ತ್ತೇಳ್ತ್. 12½ ಬಹಳ ಕಡಿಮೆ ಆತ್ ಟನ್ನಿಗೆ 13 ಸಾವಿರ ಮಾಡಿಕಣಿ ಒಳ್ಳೆ ಒಣಪುಡಿ ಮಾಲ್‌ತ್ತೇಳ್ತ್. ಬೇಡ ಬೇಡಾ ಪಾಶಾ ಶಾಬ್ ನಾವೆಲ್ಲಾ 11½ ತರ 4 ಲೋಡ್‌ನ ತಕೊಂಡು ಬುಟ್ನೊಳೆ. ಸ್ಟಾಕ್ ಕಡಿಮೆ ಇದ್ದುದಕ್ಕೆ ನಿಮಗೆ 12½ ನಂಗೆ ಕೊಟ್ಟನೆ ನಿಂಗೇ ಗೊತ್ತುಟ್ಟಲ್ಲಾ ನಮ್ಮಲ್ಲಿ ತೂಕಕ್ಕೆ ಮೋಸ ಇಲ್ಲೆ. ಅದೂ ಇದೂತ್ತೆಳಿ ತೂಕಲಿ ಕಳೆಯುದಿಲ್ಲೆಲ್ಲಾ? ಹಾಂ ! ಸರಿ ಬುಡಿ ನಂಗೆ ಪೂಲ್(cash) ನಗದ್ ಹಣ ಬೇಕ್. ನೀವು ಚೆಕ್ ಕೋಡೋದಾದ್ರೆ ಆದುಲ್ಲೇ ತ ಹೇಳಿಕೆ ಮರ್ತತಿಲ್ಲೆ. ಆತ್ ಪಾಶ ನೀನ್ ಬರುವಪ್ಪರಲ್ಲಿ ಕ್ಯಾಷ್‌ನ ರೆಡಿಮಡಗಿದ್ದನೆತಾ ಹೇಳ್ವೊ.

ಮೇದಪಜ್ಜ ಮತ್ತೆ ಡ್ರೈವರ್ ಅಲ್ಲಿ ಪಕ್ಕದ ಕ್ಯಾಂಟಿನ್‌ಲಿ ½ ಗ್ಲಾಸ್ ಕಾಫಿಕುಡ್ದ್ ಆಗಿತ್ತಿಲ್ಲೆ. ಅಷ್ಟು ಬೇಗ ಪಾಶಾ ಶಾಬ್ ನಗೆ ಆಡಿಕಂಡ್ ಬಾತ್. ಶಾಬ್ ನಿಮುದಕ್ಕೆ ಟನ್ನಿಗೆ 12ರಂಗೆ ಹಾಕಿಸಿನೆ ಪುಲ್ ಕ್ಯಾಸ್ ಹಣ ಕೊಡ್ಸಿನೆ. ಯಾವುದೂ ಲಾಸ್ ಇಲ್ಲೆ ಮತ್ತೆ ನನ್ನ ವ್ಯವಹಾರಕ್ಕೆ ನೀವು ಇಷ್ಟತ್ತೇಳಿ ಕಮಿಷನ್ ಕೊಡುಕು ಆತಾ? ತ ಕೇಳ್ತ್. ಆತ್ ನೀನ್ ಟನ್ನಿಗೆ 12ರಂಗೆ ಕೊಡ್ಸಿರೆ ನಾನ್ ನಿಂಗೆ ಕಮಿಷನ್ ಕೊಡಿಕೆ ಬೇಜಾರಿಲ್ಲೆ. ತ ಹೇಳ್ತ್. ಎಲ್ಲಾ ಅಲ್ಲಿ ಕಾಫಿ ಕುಡ್ತ್ ಆದ ಮೇಲೆ ಸೀಗೆ ಲೋಡ್ ಲಾರಿನ ನೆಟ್ಟಂಗೆ S.R.K. ಸೀಗೆಕಾಯ ಫ್ಯಾಕ್ಟರಿಗೆ ತಕಂಡ್ ಹೋದೊ.

ಮೇದಪ ಶಾಬ್, ನಿಮ್ಮ ಈ ಶೀಗೆಕಾಯಿ ಲೋಡ್‌ನ ಚೆಕ್ ಪೋಸ್ಟ್‌ಲಿ ಚೆಕಿಂಗ್ ಮಾಡ್ಸಿದರಲ್ಲಾ? ಅದರ್ಲಿ ಈ ಮಾಲ್‌ನ ಎಲ್ಲಿ ಮಾರಿಕೆತೇಳಿ ಬರ್ಸಿಕಂಡರಿ ತಾ ಕೇಳ್ತ್. ಮೇದಪಜ್ಜಂಗೆ ಇದರ ಅರ್ಥ ಗೊತಾತ್‌ಲೆ. ಮೈಸೂರುಲಿ ಮಾರಿನೆತ್ತೇಳಿ ಬರ್ಸಿದೆ ತ್ತೇಳ್ವೊ. ಛೇ ನೀವು ಇನ್‌ಮುಂದೆ ಏನ್ ಲೋಡ್‌ನ ತಂದ್ರೂ ಅದರ ರೆಗ್ಯುಲೇಟೆಡ್ ಮಾರ್ಕೆಟ್‌ಲೇ ಮಾರಿವೆತ್ತೇಳಿ ಬರ್ಸಿಕಂಡ್ ಬರೋಕು. ಇಲ್ಲೆಲ್ಲಾ ಈ ಹಾಳ್ ಸೇಲ್ಸ್ ಟ್ಯಾಕ್ಸ್‌ನವರ ಕಾಟ ಜಾಸ್ತಿ ಉಟ್ಟು ಗೊತ್ತಾತಾ? ಇರಲಿ ಅದರ ವಿಚಾರನ ನಾನ್ ನೋಡಿಕಂಡನೆ ತಾ ಫಾಶಾ ಶಾಬ್ ದೈರ್ಯಹೇಳ್ತ್.

ಸಾಹುಕಾರ ಸತ್ಯನಾರಾಯಣ ಶೆಟ್ಟಿ ಒಂದ್ ಸೀಗೆ ಕಾಯಿ ಲೋಡ್‌ನ ನೋಡಿ ಅದರ ಮಧ್ಯೆ ಮಧ್ಯೆ ಮೂಟೆಗಳ ಚೆಕ್ ಮಾಡಿ ನೋಡ್ತ್ 4-5 ಮೂಟೆಗಳ್ಲೂ ಒಳ್ಳೆ ಸೀಗೆಕಾಯಿ ಸಿಕ್ಕಿತ್. ಸರಿ ಅಲ್ಲೇ ಆಫೀಸ್ ಕ್ಲಾರ್ಕ್, ಮಹದೇವನ ಕರ್ದ್ ಈ ಸೀಗೆಕಾಯಿನ ತೂಕ ಹಾಕಿಸಿ ಲೆಕ್ಕ ಬರ್ದ್‌ಕಂಬಕ್ಕೆ ಹೇಳ್ತ್. ಅಷ್ಟೊತ್ತಿಗೆ ಪಾಶಾ ಸಾಬ್ ಕೂಢಾ ಒಂದ್ ಪೇಪರ್, ಪೆನ್‌ನ ಮೇದಪ್ಪಜ್ಜನ ಕೈಗೆ ಕೊಡ್ತ್, ಸಾಬ್ ಅವರೊಟ್ಟಿಗೆ ನೀವೂ ಕೂಡಾ ತೂಕನ ನೋಡಿಕಂಡ್ ಬರ್ದ್‌ಕಣಿ ಏಕೆತ್ತೇಳಿರೆ ನೂರಾರ್ ಮೂಟೆ ತೂಕ ಹಾಕಿಕಾಕನ ಏನೂ ಹೆಚ್ಚ್‌ಕಮ್ಮಿ ಲೆಕ್ಕ ಬಾಕೆ ಆಗದ್ ತಾ ಹೇಳ್ತ್. ಅಲ್ಲದೆ ಅವರ ತಕ್ಕಡಿನ ಕೂಡಾ ಸರಿ ಉಟ್ಟಾ ಇಲ್ಲೆನಾ ತಾ ತೋರ್ಸಿ ಕೊಟ್ಟತ್. ಆ ಮ್ಯಾಲೆ ಆ ಪ್ಲಾಟ್ ಫಾರಂ ತಕ್ಕಡಿ ಮೇಲೆ ಒಂದೊಂದೇ ಚೀಲನ ಕೆಳಗೆ ಇಳ್ಸಿತೂಕ ಹಾಕಿಕೆ ಸುರುಮಾಡಿದೊ. ಆಗ ಈ ಇಬ್ಬರೂ ಅದರ ತೂಕನ ಕ್ರಮ

ಪ್ರಕಾರ ಆಗಿ ಬರ್ರೊಂಬೊತಿದ್ದೊ. ಎಲ್ಲಾ ಒಟ್ಟಿಗೆ 130 ಚೀಲ ಸೀಗೆಕಾಯಿ 12½ ಟನ್ ತೂಕ ಬಾತ್, ಆಮೇಲೆ ಚೀಲ ಒಂದಕ್ಕೆ ಆರ್‌ಪಾಸಿ, ಚೀಲದ ವಾರ್ದಾನೇತ್ತೇಳಿ ಚೀಲ ಒಂದಕೆ 2kgತರ ಕಳ್ದ್ ಒಟ್ಟು 12¼ ಟನ್ ಸೀಗೆ ಕಾಯಿ ತೂಕಕ್ಕೆ ಲೆಕ್ಕ ಆತ್. ಹಿಂಗೆ ಟನ್‌ಗೆ 12000ದಂಗೆ ಲೆಕ್ಕ ಹಾಕಿ ಒಟ್ಟು ಒಂದು ಲಕ್ಷದ ನಲವತ್ತೇಳು ಸಾವಿರ ರೂಪಾಯಿನ ಎಲ್ಲಾ 100ರ ನೋಟ್ 1,47,000ರೂಪಾಯಿನ ಒಟ್ಟಿಗೆ ಸೇರಿಸಿ ಒಂದೇ ಕಂತೆ ಕಟ್ಟಿ ಸಾಹುಕಾರ ಸತ್ಯನಾರಾಯಣ ಶೆಟ್ರು ಈ ಮೇದಪ್ಪಜ್ಜನ ಕೈಗೆ ಕೊಟ್ರೊ. ಇದರ ನೋಡಿದ ಮೇದಪಜ್ಜಂಗೆ ಬಹಳ ಖುಷಿ ಆಗಿ ಹೋತ್. ಯಾಕೆತ್ತೇಳಿರೆ ಆ R.M.C. ಮಾರ್ಕೆಟ್‌ಲಿ ಆಗಿದ್ರೆ ಅವರ ತೂಕಲಿ, 11ಟನ್‌ಗಿಂತ ಜಾಸ್ತಿ ಬಾಕಿತ್ಲೆ. ಅಲ್ಲದೆ ಸೀಗೆಗೆ ರೇಟ್ ಕೂಡಾ ಕಡಿಮೆ ಹಿಂಗಾಗಿ ಒಟ್ಟು 35,000 ರೂಪಾಯಿನೇ ಈಗ ಇಲ್ಲಿ ಜಾಸ್ತಿ ಸಿಕ್ಕಿದಂಗೆ ಆತ್‌ತ ಗ್ಯಾನ ಮಾಡಿಕಂಡೊ. ಜೊತೆಗೆ ಬಂದ ಪಾಶಾ ಸಾಬ್ ಈ ಹಣನೆಲ್ಲಾ ಜೋಪಾನ ಆಗಿ ಒಂದ್ ಗೋಣಿ ಬ್ಯಾಗ್ ಒಳಗೆ ಸೇರಿಸಿ ಸುರುಟಿ ಗಂಟ್‌ಕಟ್ಟಿ, ಕೊಟ್ಟು ವ್ಯಾಪಾರ ವ್ಯವಹಾರ ಲಾಯಕ್‌ಲಿ ಮುಗ್ದಂಗೆ ಆ ಪ್ಯಾಕ್ಟರಿ ಸಾಹುಕಾರಂಗೆ ಹೋಗಿ ಬಂದವೆತ್ತೇಳಿ ನಮಸ್ಕಾರ ಮಾಡಿಕಂಡ್ ಹೊರಗೆ ಹೊರಟು ಬಂದೊ. ಅಷ್ಟೊತ್ತಿಗೆ ಲಾರಿಡ್ರೈವರ್ ಗೇಟ್‌ಹತ್ರ ನಿಂತಿತ್‌ಸರಿ ಮೇದಪಜ್ಜ ಅವಂಗೆ ತಡಮಾಡದೆ ಅವನ ಲಾರಿ ಬಾಡಿಗೆ ಹಣದ ಮೇಲೆ ಇನ್ನೂ ಮುನ್ನೂರು ರೂಪಾಯಿ ಹೆಚ್ಚಿಗೆ ಸೇರ್ಸಿ ಕೊಟ್ಟ್‌ಕಳ್ಸಿದೊ. ಅಷ್ಟೊತ್ತಿಗೆ ಪಾಶಾ ಹೋಗಿ ಒಂದ್ ಆಟೋ ರಿಕ್ಷನ ತಕಂಡ್ ಅಲ್ಲಿಗೆ ಬಾತ್. ಪಾಶಾ ಈ ಮೇದಪ್ಪಜ್ಜನ ಜೋಪಾನ ಆಗಿ ಆಟೋದೊಳಗೆ ಕುದುರಿಸಿಕಂಡ್ ವಾಪಾಸ್ಸ್ ಊರಿಗೆ ಹೊರಡುವ ಬಸ್ ಸ್ಟಾಂಡ್ ಕಡೆಗೆ ಹೊರಟೊ.

ಅಷ್ಟೊತ್ತಿಗೆ ಮೇದಪ್ಪಜ್ಜಂಗೆ ಹೊಟ್ಟೆ ಹಸಿಯಕೆ ಶುರು ಆತ್. ಅಲ್ಲದೆ ಈ ವ್ಯಾಪಾರ ಮಾಡಿಕೊಟ್ಟ ಪಾಶ ಹೈದಂಗೆ ಕಮಿಷನ್, ತೂಡಾಕೊಡಿಕೆ ಬಾಕಿ ಉಟ್ಟಲ್ಲಾ? ಹಂಗಾಗಿ ಈ ಇಬ್ಬರೂ ಅಲ್ಲೇ ಬಸ್‌ಸ್ಟ್ಯಾಂಡ್‌ನ ಎದುರುಗಡೆ ಬಿಲ್ಡಿಂಗ್‌ಲಿ ಇದ್ದ ಹೊಟೇಲ್ ಮಹರಾಜ್ ಕಡೆ ಹೊರಟೊ.

ಅಲ್ಲೇ ಎದುರಗಡೆ ಇದ್ದ ಹೋಟೇಲ್ ಮಹರಾಜಕ್ಕೆ ಕರ್ಕಂಡ್ ಹೋತ್. ಮೊದ್ಲ್ ಊಟ ಆಗ್ಲಿ ಆಮೇಲೆ ಕಮಿಷನ್ ವ್ಯವಹಾರ ಈ ಪಾಷ ಶಾಬ್‌ಗೆ ಎಷ್ಟು ಕೊಡ್ದು? ಅಂವ ಎಷ್ಟು ಕೇಳ್ದೊತಾ ಹೆಚ್ಚಿಗೆ ಏನಾರಾ ಕೇಳಿ ಬುಡಾತ್ತೇಳಿ ಲೆಕ್ಕ ಹಾಕುತಿದ್ದೊ. ಅಷ್ಟೊತ್ತಿಗೆ ಮೇಜಿ ಮೇಲೆ 2 ಬಾಟ್ಲ್ ಕೋಲ್ಡ್ ಬೀರ್ ಬಂದ್ ಕುದ್ದತ್. ಸರಿ ಅದರ ಓಪನ್ ಮಾಡಿ ಇಬ್ಬರೂ ನಿಧಾನಕೆ ಕುಡಿಯಕೆ ಶುರು ಮಾಡಿದೊ. ಮತ್ತೆ ಅದ್ ಇದ್ ಮಾತಡಿಕಂಡ್ ಚಿಕನ್ ಕುರ್ಮಾ ಗೀರೈಸ್‌ನ ಮುಗ್ಸಿದೊ. ಊಟ ಆದ ಮೇಲೆ ಅಲ್ಲಿಗೆ ಸ್ವೀಟ್ ಬೀಡನ ತರ್ಸಿಕಂಡ್ ಬಾಯಿಗೆ ಹಾಕಂಡ್ ಸಿಗರೇಟ್ ಹಚ್ಚಿಕಂಡ್ ಹಂಗೆ ಕುದ್ದಿದ್ದೊ. ಆದ್ರೂ ಈ ಶಾಬಿ ಹೈದ ಕಮಿಷನ್ ಹಣ ಇಷ್ಟ್ ಕೊಡಿತ್ತೇಳಿ ಕೇಳ್ತ್‌ಲೆ. ಹಿಂಗಾಗಿ ಮೇದಪಜ್ಜನೇ ಒಮ್ಮೆ ಕೆಮ್ಮಿ ಬುಟ್ಟ್ ಇನ್ ನಾನ್ ಹೊರಟನೆರ? ನಿನ್ನ ಕಮಿಷನ್ ಎಷ್ಟ್? ತಾ ಹೇಳ್ತ್‌ಲಲ್ಲಾ? ತೇಳ್ತ್. ಅಯ್ಯೋ ಬುಡಿ ಶಾಬ್ ನಮುದಕ್ಕೆ ನೀವು ಎಷ್ಟಾದ್ರೂ ಕೊಡಿ ನಿಮ್ಮ ವಿಶ್ವಾಸ ಒಂದಿದ್ರೆ ಸಾಕ್, ನಾನ್ ನಿಮ್ಮ ಸೀಗೆ ಕಾಯಿಗೆ ಒಳ್ಳೆ ರೇಟ್ ಕೊಡ್ಸಿಕೆ ನೀವೇ ತಿಳ್ಕಂಡ್ ಕೊಡಿತ್ತೆಳ್ತ್ ಅಜ್ಜ ಗ್ಯಾನ ಮಾಡಿ ಲೆಕ್ಕ ಹಾಕಿ. 100ರ ಒಂದ್ ಹೊಸ ಕಂತೆನ ತೆಗ್ದ್ ಪಾಶ ಶಾಬ್‌ನ ಕೈಗೆ ಕೊಟ್ಟ್ ನೋಡ್ ಶಾಬ್ ಇದರಲ್ಲಿ 10,000 ಉಟ್ಟ್ ನೀನ್ ಮಡಿಕತ್ತೇಳ್ತ್. ಪಾಶಂಗೆ ಬಹಳ ಖುಷಿ ಆಗಿ ಹೋತ್. ಅಜ್ಜಕೊಟ್ಟ ಆ ಹಣಲಿ, ನಾಲ್ಕು ಸಾವಿರನ ಅಜ್ಜಂಗೆ ವಾಪಾಸ್ ಕೊಡುತ್ತಾ, ಅಜ್ಜಾನಂಗೆ ಇಷ್ಟೇ ಸಾಕ್. ಪಾಪ ನೀವು ಕಷ್ಟ ಪಟ್ಟವು ಮಡಗಿಕಣ್ತ್ತೇಳಿ ಆ 10,000 ರೂ. ಲಿ ನಾಲ್ಕು ಸಾವಿರನ ವಾಪಾಸ್ ಕೊಟ್ಟತ್. ಸರಿ ಏಳಿ ನಿಮ್ಮನ ಬಸ್ಸ್‌ಲಿ ಕೂರ್ಸಿ ಆದ ಮೇಲೆ, ನಾನ್ ವಾಪಾಸ್ಸು ಹೋದು. ಈಗ ನಿಮ್ಮ ಕೈಲಿ ಹಣದ ಚೀಲ ಉಟ್ಟು ಅದರ ಜೋಪಾನಾಗಿ ನೀವು ನಿಮ್ಮ ಮನೆಗೆ ತಲುಪುಸುಕ್ಕೊಲ್ಲಾ? ತೇಳಿಕಂಡ್ ಹೊರಗೆ ಬಂದೊ, ಎದುರುಗಡೆನೇ ಬಸ್‌ಸ್ಟ್ಯಾಂಡ್. ಪಾಶ ಶಾಬ್ ಬೇಗ ಬೇಗ ಕಾಲ್ ಹಾಕಂಡ್ ಬಂದ್. ಆನೆಕಲ್ ಭಾಗಮಂಡ್ಲಕ್ಕೆ ಹೋಗುವ ಬಸ್ಸಿಗೆ ಹತ್ತಿ ಒಂದ್ ಒಳ್ಳೆ ಸೀಟ್‌ನ ಹಿಡ್ತ್. ಮೇದಪಜ್ಜ ಹಿಂದೆಂದ ಬಂದ್ ಬಸ್ ಹತ್ತಿಕಂಡೊ. ಅವುಕೆ ಜೋಪಾನಾಗಿ ಸೀಟ್ ಬುಟ್ಟ್‌ಕೊಟ್ಟ್ ಈ ಶಾಬ್ ಹೈದ ಅವರ್‌ನ ಬೀಳ್ಕೊಡತ್. Mr. ಮೇದಪ್ಪಜ್ಜಂಗೆ ಈ ಪಾಶಶಾಬ್ ಹೈದನ ನಿಯತ್‌ನ, ಅವನ ಜವಾಬ್ದಾರಿಯುತ ಕೆಲ್ಸನ ಕಂಡ್ ಮನ್ಸ್‌ಲೆ ಬಹಳ ಅಭಿನಂದಿಸಿದೊ. ಇಂಥದೊಂದ್ ಮಂಜನಂಗೆ ಇದ್ದಿದ್ರೆ ನಾನ್ ಈ ವಯಸ್ಸ್ ಕಾಲಲಿ ಹಿಂಗೆಲ್ಲಾ ದೂರ ಬಂದ್ ಒದ್ದಾಡುವ ಕೆಲ್ಸ ಇರ್‌ತಿತ್ಲಲ್ಲಾ? ತೇಳಿ ಗ್ಯಾನ ಮಾಡಿಕಂಡೊ.

ಬಸ್ ಹೊರಟ್ ಹೋದ ಮೇಲೆ ಪಾಷಾ ಶಾಬ್ ಬಸ್‌ಸ್ಟ್ಯಾಂಡ್ ಶಾಚಾಲಯಕ್ಕೆ ಬೇಟಿಕೊಡಕೆ ಹೋಗಿತ್ತಂ ಅಂಪ ಹೊರಗೆ ಬಾಕಾಕನ ತಲೆಲಿದ್ದ ಟೊಪ್ಪಿ, ಗಡ್ಡ, ದೊಗಳೆ ಜುಬ್ಬ ಎಲ್ಲಾ ಮಾಯವಾಗಿ ಹೋಗಿತ್. ಈಗ ಒಬ್ಬ ನಾರ್ಮಲ್ ಹೈದನಂಗೆ ಆತ್. ಕತ್ತಲಾಕೆ ಇನ್ನೂ ತುಂಬಾ ಹೊತ್ತ್ ಇತ್ತ್. ಹಂಗಾಗಿ ಅಲ್ಲಿಂದ ನೆಟ್ಟಂಗೆ ಮೇಲೆ ಬಾಕಾಕನ ಗುಲ್‌ಮೊಹರ್ ಪಾರ್ಕ್ ಕಣ್ಣಿಗೆ ಬಿತ್. ಹೋಗಿ ಅಲ್ಲಿ 1½ ಗಂಟೆ ಆರಾಂ ಆಗಿ ಕುದ್ದ್ ಕಾಲ ಕಳ್ತ್. ಇಂದ್ ಒಳ್ಳೆ ಸಂಪಾದನೆ ಒಟ್ಟ್ 12,000 ರೂಪಾಯಿ ಸಿಕ್ಕಿ ಹೋತ್‌ತಾ ಗ್ಯಾನ ಮಾಡಿಕಂಡ್ ಕುದ್ದಿರಿಕಾಕನ ಅಲ್ಲೇ ಎದುರುಗಡೆ ದೊಡ್ಡ ಚರ್ಚಿಗೆ ಜನ ಬಂದ್ ಬಂದ್ ಸೇರ್ತಿದೊ. ಅವರ ಮಧ್ಯೆ ಈ Mr. Raju ಹೋತ್. ತಾನೂ ಭಕ್ತಿಂದ ಅವರೊಟ್ಟಿಗೆ ಸೇರಿಕಂಡ್ ಹಣೆ, ತಲೆ, ಎದೆನ ಮುಟ್ಟಿ ವಂದಿಸಿಕಂಡ್ ತಾನ್ ಏನಾದ್ರೂ ತಪ್ಪ್ ಮಾಡಿದ್ರೆ ಕ್ಷಮಿಸಿಬುಡ್ ಹೇ ಜ್ಯೂ ಜೀಸಸ್ ಗಾಡ್ ಅಂತ ಬೇಡಿ ಕಂಡತ್. ಅಲ್ಲಿ ಎಲ್ಲಾ ತರದ ಕಾರ್ಯಕ್ರಮನ ನೋಡಿ ಆದಮೇಲೆ ಅಲ್ಲಿಂದ ಮೆತ್ತಂಗೆ ವಾಪಾಸ್ ತನ್ನ ಲಾಡ್ಜ್ ಕಡೆಗೆ ಹೊರಟತ್.

(ಮುಂದ್‌ವರ್ದದೆ)

ಹಣ್ಣು ತಿಂದವ ಜಾರಿದ, ಸಿಪ್ಪೆ ತಿಂದವ ಸಿಕ್ಕಿ ಬಿದ್ದ

# ಸಿಟಿಂಯ ಸಹವಾಸ

ಹಬ್ಬ-ಹರಿದಿನ, ಮದುವೆ,ಮುಂಜಿ ಎಂತಾದರ್ ಜಂಬರ ಇದ್ದರೆ ಸಾಮಾನ್ಯವಾಗಿ ಊರುಗೆ ಬರುವ ಪಾಪು ಒಂದೆರಡ್‌ದಿನ ಮನೆಲಿ ಇದ್ದ್ ಹೋದೆ. ಬಿದ್ದು ಮತ್ತೆ ಸೀತಂಗೆ ಇರುದು ಅಂವೊಬ್ಬನೇ ಮಂಜ. ಅಪರೂಪಕೆ ಮನೆಗೆ ಬಂದ ಮಂಜ ಇನ್ನೂ ನಾಕ್‌ದಿನ ಒಳ್ಸಿಕಂಡ್, ಬಾಯಿ ತುಂಬಾ ಮಾತಾಡಿ, ಅವಂಗೆ ಬೇಕ್ ಬೇಕಾದ ತಿಂಡಿಗಳ್‌ನೆಲ್ಲ ಮಾಡಿಕೊಟ್ಟ್ ಉಪಚಾರ ಮಾಡುವ ಆಸೆ ಅವುಕೆ. ಆದರೆ ಅವನ ಹೆಣ್ಣ್ ಉಟ್ಟಲ ! ನೆಮ್ಮದಿಯಾಗಿ ಅವನ ಒಂದು ಕಡೆ ಕೂರಿಕೆ, ನಿಲ್ಲಿಕೆ ಬುಡ್ಕಿಲ್ಲೆ. "ಮನೆಗೆ ಬೀಗ ಹಾಕಂಡ್ ಬಂದೊಳೊ, ಅಲ್ಲಿ ಎಂತ ಆವುಟೋ ಏನೋ ನನ್ನ ಜೀವ ಎಲ್ಲ ಅತ್ತಳೇ ಎಳೀತಾವುಟ್ಟು"ತಾ ಪಿರಿ ಪಿರಿ ಹೇಳಿಕಂಡಿದ್ದ್, ಬಂದ ಒಂದೆರಡ್ ದಿನಲೇ ಅವನ ಹೊರ್‌ಡಿಸಿ ಕಂಡ್ ಹೋಬುಟ್ಟಿದೆ.

ಸಿಟಿಗೆ ಹೋಗಿ ಸೇರ್‌ದ ಮೇಲೆ ಈಗ ಮನೆಗೆ ಬಾಕನ ನಾಡ್ ಕೆಲ್ಸ ಮಾಡ್‌ಕೆ ಅವುಳಿಗೆ ಮೈ ಬೊಗ್ಗುದುಲೆ ಕಂಡದೆ. ಅದ್‌ಕ್ಕಾಗಿನೇ ಇರೋಕು ಮನೆಗೆ ಬಂದರೂ ಇಲ್ಲಿ ಹೆಚ್ಚ್ ದಿನ ಇರ್ದುಲೆ. ಮದುವೆ ಆಕೆ ಮುಂದೆ ಹೊತಾರೆ ಕೋಳಿ ಕೂಗುವ ಹೊತ್ತುಗೆ ಎದ್ದ್, ಒಲೆಗೆ ಕಿಚ್ಚಿ ಮಾಡಿ, ಮುಸುರೆ ಪಾತ್ರೆಗಳೆಲ್ಲ ಬೆಳ್ಗಿ, ಅಂಗಳ ಗುಡ್ಸಿ, ಚೂಟಿಯಾಗಿ ಓಡಾಡಿ ಕಂಡಿದ್ದ್, ಹೊತ್ತು ಹುಟ್ಟ್‌ಕೆ ಮುಂದೇ ಎಲ್ಲ ಕೆಲ್ಸ ಮಾಡಿ ಮುಗ್ಸ್‌ತ್ತಿದ್ದವುಳು ಈಗ ಏಳುದು ಏಳ್‌ಗಂಟೆ ಹೊಡ್ದ ಮೇಲೆನೇ. ಸೀತನೂ ಅಷ್ಟೆ ಸೊಸೆಗೆ ಎಂತ ಕೆಲ್ಸನೂ ಹೇಳದೆ, ಮಂಜ, ಸೊಸೆ ಮನೆಗೆ ಬಂದ ಖುಷಿಲಿ ಹೆಚ್ಚಿನ ತ್ರಾಣ ಬಂದಂಗಾಗಿ ಹುರುಪುಲಿ ಓಡಾಡಿ ಎಲ್ಲ ಕೆಲ್ಸನೂ ತಾನೇ ಮಾಡ್‌ದೆ. ಇವು ಎಷ್ಟೇ ಪ್ರೀತಿಲಿ ನೋಡಿಕಂಡರೂ ಅವು ಎರ್‌ಡ್ ದಿನಕ್ಕಿಂತ ಹೆಚ್ಚಿಗೆ ಮನೆಲಿ ಒಳಿಯುವಂಗಿಲ್ಲೆ.

ಒಂದಾದ ಮೇಲೆ ಒಂದರಂಗೆ ಸಾಲಿಗೆ ಮೂರು ಹೆಣ್ಣ್‌ಮಕ್ಕಹುಟ್ಟಿದ ಮೇಲೆ ಕಂಡ ಕಂಡ ದೇವರುಗಳಿಗೆಲ್ಲ ಹರ್ಕೆ ಹೊತ್ತ್ ಬೇಡಿಕಂಡ ಫಲಂದಾಗಿ ಕಡೆಗೆ ದೇವರದಯಂದ ಹುಟ್ಟಿದಂವ ಪಾಪು. ಹಿಂಗಾಗಿ ಮನೆಲಿ ಎಲ್ಲವುಕೂ ಅವನ ಮೇಲೆ ಬಾಳಾ ಪ್ರೀತಿ. ಅಂವ ಎಷ್ಟೇ ಗಲಾಟೆ ಮಾಡ್‌ರೂ, ಕೀಟಲೆ ಮಾಡ್‌ರೂ ದೊಡ್ಡವು ಅವನ ಹೊಡಿಯೊದಾಗಲೀ, ಬೊಯ್ಯೊದಾಗಲೀ ಮಾಡ್‌ತ್ತಿತ್‌ಲೆ. ಹಂಗಾಗಿ ಇಂವ ಆಡ್‌ದೇ ಆಟ. ಸಣ್ಣತಿರ್‌ಲಿ ಮನೆಲಿ ಅವನ ತುಂಟಾಟ ಸಹಿಸಿಕೆ ಬೊತ್ತದಾಗಿತ್ತ್. ಮನೆಗೆ ಬರುವ ಜನಿಗೆ ಇವರ ಮಾತ್‌ನ ಕೇಳುವಷ್ಟ್ ತಾಳ್ಮೆ ಇರ್‌ಲೀ, ಇಲ್ಲದೇಯಿರ್‌ಲಿ ಇವುಕ್ಕಂತೂ ತಮ್ಮ ಮಂಜನ ತುಂಟತನ, ಅವನ ಆಟ ಪಾತಗಳಬಗ್ಗೆ ಹೆಮ್ಮೆಂದ ಹೇಳಿಕಣದಿದ್ದರೆ ಸಮಾಧಾನನೇ ಇಲ್ಲೆ.

ಹೆಚ್ಚಾಗಿ ಪೋಂತಿ, ಕೊಂಡಾಟ ಮಾಡಿ ಸಾಂಕಿದ ಮಕ್ಕ "ಅಜ್ಜಿ ಸಾಂಕಿದ ಮಂಜ........"ತ ಒಂದು ಗಾದೆ ಉಟ್ಟಲ: ಹಂಗೆ ಕೆಟ್ಟ ಚಾಳಿಗೆ ಬಿದ್ದ್ ಕಡೆಗೆ ಯಾವ ಪ್ರಯೋಜನಕೂ ಇಲ್ಲದಂಗಾದು ಜಾಸ್ತಿ. ಆದರೆ ಪಾಪು ಮಾತ್ರ ಅಂತಹವರ ಕೂಟುಗೆ ಸೇರ್‌ತ್ಲೆ. ಮನೆಲಿ ಎಷ್ಟೇ ತುಂಟತನ ಮಾಡ್‌ರೂ ಆಟ ಪಾತಗಳ್‌ಲಿ ಯಾಗೊಳು ಮುಂದೆನೇ ಇದ್ದ್ ಒಳ್ಳ ರೀತಿಲೇ ಮುಂದಕೆಬಾತ್.

ಹೆಣ್ಣ್ ಮಕ್ಕ ಎಲ್ಲ ಮದುವೆ ಆಗಿ ಗಂಡಂದರ ಮನೆ ಸೇರ್ದ ಮೇಲೆ ಇರುವ ಒಬ್ಬ ಮಂಜ ಆದ್‌ರೂ ಆಸ್ತಿ ಪಾಸ್ತಿ ನೋಡಿಕಂಡ್ ಮನೆಲಿ ಲಾಯ್ಕಾಗಿ ಇರ್‌ಲಿತೇಳುವ ಗ್ಯಾನ, ಬಿದ್ದು ಮತ್ತೆ ಸೀತಂಗೆ. ಈಗನ ಕಾಲಲಿ ಚಾಕ್‌ರಿ ಸಿಕ್ಕುದೇ ಕಷ್ಟ. ಅಂತಹವರ್‌ಲಿ ಸಿಕ್ಕಿದ ಚಾಕ್‌ರಿನ ಬುಡ್‌ದು ಸರಿಯಲ್ಲತೇಳುವ ವಾದ ಪಾಪುದ್. ಅಂತೂ ಅಪ್ಪ ಅವ್ವನ ಒಪ್ಪುಸಿ ಅಂವ ಹೋಗಿ ಬೆಂಗ್ಳೂರುಲಿ ಚಾಕ್‌ರಿಗೆ ಸೇರ್‌ತ್.

ದೂರದ ಊರುಲಿ ಒಬ್ಬನೇ ಇದ್ದ್, ಕೈ, ಬಾಯಿ ಸುಟ್ಟ್‌ಕಂಡ್ ಭಂಗ ಬಾದು ಬೇಡತ. ಆದಷ್ಟ್ ಬೇಗ ಪಾಪುಗೆ ಮದುವೆ ಮಾಡುವ ಮನ್ಸ್ ಮಾಡ್ದೊ. ಮನೆಗೆ ಬರುವ ಸೊಸೆ ತಮ್ಮ ಕುಟುಂಬಕೆ ಹೊಂದಿಕಂಡ್ ಹೋಗುವಂತವುಳಾಗಿರೊಕು ಮತ್ತೆ ಮುಂದೆ ಅತ್ತೆ, ಮಾವನ ಕೂಡ ಲಾಯಿಕ ನೋಡಿ ಕಣವುಳಾಗಿರೊಕು ತೇಳುವ ಗ್ಯಾನಲಿ ಗೂಡೆ ನೋಡಿಕೆ ಸುರು ಮಾಡ್ದೊ. ಅಂತಹ ಸಮಯಲಿ ಅವರ ದೃಷ್ಟಿಗೆ ಬಿದ್ದವುಳು ಸೀತನ ಅಣ್ಣನ ಮಗ್‌ಳು ಪಮ್ಮಿ.

ಪಮ್ಮಿನ ಗುಣ, ನಡತೆ ಎಲ್ಲ ಚೆನ್ನಾಗಿತ್ತ್, ಮತ್ತೆ ಹಿರಿಯವರ್ನ ಕಂಡರೆ ಭಯ, ಭಕ್ತಿ ಇರುವಂತ ಗೂಡೆ ಬಿ.ಎ. ಪಾಸ್ ಮಾಡಿತ್ತ್, ನೋಡ್‌ಕೂ ಸುಮಾರಾಗಿ ಲಕ್ಷಣವಾಗಿನೇ ಇತ್ತ್ ಪಾಪುಗೆ ಇವುಳು ಸರಿಯಾದ ಜೋಡಿಯಾದುತ ಎಲ್ಲವು ಸೇರಿ ತೀರ್ಮಾನ ಮಾಡ್‌ದೊ.

ಮದುವೆ ಆಗಿ, ಹೆಣ್ಣ್‌ನ ಜೊತೆಲಿ ಕರ್ಕಂಡ್ ಹೋದ ಮೇಲೆ ಪಾಪುಗೆ ಮುಂದೆ ನಂಗೆ ಅಡಿಗಡಿಗೆ ಊರುಗೆ ಬಂದ್ ಹೋಕೆ ಆದುಲೆ. ಅಂತೂ ಗ್ಯಾನಾಕನ ಒಮ್ಮೆ ಬಂದ್ ಎಲ್ಲವರ್‌ನ ಮಾತಾಡ್ಸಿಕಂಡ್ ಹೋದೆ. ಮನೆಗೆ ಬಾಕನ ಎಲ್ಲ ಅವಂದ್ ಒಂದೇ ಮಾತ್, "ಇನ್ನೂ ಎಂತಕೆ ನೀವು ಇಲ್ಲೆ ಇದ್ದ್‌ಕಂಡ್ ಕಷ್ಟಬಾದು? ಇಷ್ಟ್‌ವರ್ಷಗಂಟ ನೀವು ಯ್ದುದ್ ಸಾಕ್. ಈ ಆಸ್ತಿನೆಲ್ಲ ಮಾರಿ ಬುಟ್ಟು ಬಂದ್ ನಮ್ಮೊಟ್ಟಿಗೆ ಇದ್ದ್‌ಬುಡಿ. ನಂಗೂ ನಿಮ್ಮನ ಬುಟ್ಟ್ ಇರ್‌ಕೆ ಆಗ್ತಾ ಇಲ್ಲೆ. ಒಂದೇಕಡೆ ಇದ್ದರೆ ಎಲ್ಲವುಕೂ ನೆಮ್ಮದಿ ಇದ್ದದೆ ".

ಆಸ್ತಿನ ಮಾರಿ ಹೋಗಿ ಸಿಟಿಲಿ ಇರುವಂತಹ ವಿಚಾರನಂತೂ ಬಿದ್ದು, ಸೀತ ಕನ್ಸ್‌ಮನ್ಸ್‌ಲೂ ನೆನ್ಸಿಕೆ ಸಾಧ್ಯಯಿಲ್ಲೆ. ಅಂತೂ ಅಂವ ಮನೆಗೆ ಬಾಕನ ಎಲ್ಲ ಇದೇ ತರ ವತ್ತಾಯ ಮಾಡ್ತಾ ಇದ್ದದರ್‌ಂದ ಒಮ್ಮೆ ಸೀತ, "ಒಂದು ಸೊಲ್ಪ ದಿನ ಮಟ್ಟಿಗೆ ಹೋಗಿ ಮಕ್ಕಳೊಟ್ಟಿಗೆ ಇದ್ದ್ ಬಾನೊ. ಆಗ ಅವರ ಮನ್ಸ್‌ಗೂ ಸಮಾಧಾನ ಆದೆ"ತ ಗಂಡನೊಟ್ಟಿಗೆ ಹೇಳ್ತ್. ಬೆಂಗ್ಳೂರುಗೆ ಹೋಗಿ ಮಂಜನ ಮನೆ ನೋಡಿ ಬರುವ ಗ್ಯಾನ ಬಿದ್ದುಗೂ ಬಾಳ ದಿನಂದ ಇತ್ತ್. ಆದರೆ ನಾಡ್‌ಲಿ ಯಾಗೊಳು ಎಂತಾದರ್ ಕೆಲ್ಸ ಇರುದರ್‌ಂದ ಇದುವರೆಗೆ ಹೋಕೆ ಪುರ್ಸೊತ್ತೇ ಆಗಿತ್ಲೆ. ಈಗ ಹೆಚ್ಚಿನ ಕೆಲ್ಸ ಎಂತದೂ ಇತ್ಲೆ. ಹಂಗಾಗಿ ಅವನೂ ಸೀತನ ಮಾತ್‌ಗೆ ಒಪ್ಪಿತ್.

---

ಸುಖ ಎಲ್ಲರಿಗೂ ಬೇಕು ಅದಕ್ಕಾಗಿ ಬೆವರು ಸುರಿಸಿ ದುಡಿಯಬೇಕು

ಕೆಳೆಮನೆ ಚಾಮಿನ ಕಂಡ್ ಅವಂಗೆ ಸಂಗತಿ ಎಲ್ಲ ಹಿಂಗಿಂಗೆ ಉಟ್ಟುತ ಹೇಳ್ವೊ. ತಿರ್ಗಿ ಮನೆಗೆ ಬರುವಲ್ಲಿವರೆಗೆ ಎಲ್ಲ ಉಸ್ತುವಾರಿ ನೋಡಿಕಣುವ ಜವಾಬ್ದಾರಿನ ಅವಂಗೆ ವಹಿಸಿ ಬೆಂಗ್ಳೂರಿಗೆ ಪೊರ್ಟ್ ಬಂದೊ.

ಸುರೂದಿನ ಪ್ರಯಾಣ ಮಾಡಿ ಬಂದ್ ಎಲ್ಲವು ಸುಸ್ತಾಗಿದ್ದವರ್‌ಂದೆ ರಾತ್ರಿ ಊಟ ಮಾಡಿ ಬೇಗ ಮಲ್ಗಿದೊ. ಮಾರನೆದಿನಂದ ಪಾಪು ಮತ್ತೆ ಪಮ್ಮಿ ಅವರವರ ಕೆಲಸಲಿ ಮುಳುಗಿದೊ. ಅವಿಬ್ಬರೂ ಹೊತಾರೆಮನೆಬುಟ್ಟ್ ಕೆಲ್ಸಕೆ ಹೋದರೆ ತಿರ್ಗಿ ಬಂದ್ ಸೇರ್ತಿದ್ದದ್ ಪೊತ್ತು ಮುಳ್‌ಗಿ ಕತ್ತಲಾದ ಮೇಲನೇ. ಬಿದ್ದುಗೂ, ಸೀತಂಗೂ ಹಗ್‌ಲಿಡೀ ಸುಮ್ಮಂಗೆ ಮನೆಲಿ ಕುದ್ದ್ ಹೊತ್ತು ಹೋಗದೆ ಪಿರಿ ಪಿರಿ ಹಿಡ್ತ್. ನಾಡ್‌ಲಾದರೆ ಗದ್ದೆ, ತೋಟ ಎಲ್ಲ ತಿರ್ಗಾಡಿಕಂಡಿದ್ದ್, ಸಣ್ಣ ಪುಟ್ಟ ಕೆಲ್ಸ ಮಾಡ್ತಾ ಇದ್ದರೆ ಹೊತ್ತು ಹೋದೇ ಗೊತ್ತಾದುಲೆ. ಇಲ್ಲಿಸುಮ್ಮಂಗೆ ಕುದ್ದ್ ಕಾಲ ಕಳಿಯೊದು ಬಾಳಾ ಕಷ್ಟ. ಹಿಂಗೆಲ್ಲೂ "ಎಲ್ಲೂ ತಿರ್ಗಾಡದೆ ಒಂದೇ ಕಡೆ ಕುದ್ದ್ ಕೈ ಕಾಲ್ ದಪ್ಪ ಆವುಟು. ನಾನ್ ಹೊರಗೆ ಹೋಗಿ ಸೊಲ್ಪ ಹೊತ್ತುತಿರ್ಗಾಡಿಕಂಡ್ ಬನ್ನೆತ ಸೀತಂಗೆ ಹೇಳಿ ಬುಟ್ಟು ಬಿದ್ದು ಹೊರಗೆ ಹೋತು. ಹೋದಂವ ಮಧ್ಯಾಹ್ನ ಊಟದ ಹೊತ್ತಾದರೂ ತಿರ್ಗಿ ಮನೆಗೆ ಬಾತ್‌ಲೆ. "ಇವು ಎತ್ತ ಹೋಬುಟ್ಟೊಪ್ಪಾ? ಹಾದಿ ಮನಿ ತಪ್ಪಿ ಹೋತೋ ಏನೋ?"ತ ಬ್ಯಾಜರ ಮಾಡಿಕಂಡ್ ಸೀತನೂ ಊಟ ಮಾಡದೆ ಪಾರಕಾದ್ ಕಂಡ್ ಕುದ್ದತ್.

ಸುಮಾರ್ ಮೂರುಗಂಟೆ ಹೊತ್ತುಗೆ ಮುಖ ತುಂಬಾ ಬೆವುರು ಸುರ್ಸಿಕಂಡ್ ಸುಸ್ತಾಗಿ ಬಂದ ಬಿದ್ದು ಸೋಪಾ ಮೇಲೆ ಕಾಲ್ ನೀಂಡಿ ಮಲ್ಗಿಬುಡ್ತ್. ಸೀತ ಕುಡಿಯಕೆ ನೀರ್ ತಂದ್ ಕೊಟ್ಟರೂ ತಕಣದೆ ಎಷ್ಟ್ ಮಾತಾಡ್ಸಿರೂ ಬಾಯಿ ಬುಡದೆ ಕಣ್ಣ್ ಮುಟ್ಟಿ ಸುಮ್ಮಂಗೆ ಮಲ್ಗಿತ್. ಅರ್ಧಗಂಟೆ ಕಳ್ದ ಮೇಲೆ ಎದ್ದ್ ಬಾತ್‌ರೂಮುಗೆ ಹೋಗಿ ಕೈ ಕಾಲ್ ಮುಖ ತೊಳ್ದ್ ಬಂದ್, "ಹೊಟ್ಟೆ ಹಸಿತಾವುಟ್ಟು ಊಟ ಇಕ್ಕ್"ತ ಹೇಳ್ತ್ ಊಟ ಆಗಿ ಸುಧಾರ್ಸಿಕಂಡ ಮೇಲೆ ಬಂದ್ ಸೋಪಾ ಮೇಲೆ ಆರಾಮಾಗಿ ಕುದ್ದ್‌ಕಂಡ್, ತಿರ್ಗಾಡಿಕೆ ಹೊರಗೆ ಹೋಗಿ ಪಟ್ಟ ಪಾಡ್‌ನ ಹೇಳಿಕೆಸುರು ಮಾಡ್ತ್.

ದೊಡ್ಡಿಲಿ ಕೂಡಿ ಹಾಕಿದ್ದ ದನುಗ ಬಿಚ್ಚಿ ಬುಟ್ಟಂಗೆ ಖುಷಿಲಿ ಹೊರಗೆ ಓಡುವಂಗೆ ಮನೆಯೊಳಗೇ ಕುದ್ದ್ ಬೇಜಾರಾಗಿದ್ದ ಬಿದ್ದು ತಿರ್ಗಾಡಿಕಂಡ್ ಸುಮಾರ್ ದೂರ ಹೋತು. ಅಲ್ಲಿಂದ ತಿರ್ಗಿ ಬಾಕನ ಎಲ್ಲ ರಸ್ತೆಗಳೂ ಒಂದೇ ನಮೂನೆ ಕಂಡವೆ. ಅವುಗಳ್‌ಲಿ ಮಂಜನ ಮನೆ ಇರುವ ರಸ್ತೆ ಯಾವದ್‌ತ ಕಂಡ್ ಹಿಡಿಯಕೆ ಬೊತ್ತದಾತ್. ಯಾರ್‌ನಾದರ್ ಕೇಳೂಕುತಾದರೆ ಮನೆ ಅಡ್ರೆಸ್ ಗೊತ್ತಿಲ್ಲೆ. ಪಾಪು ಅಥವಾ ಪಮ್ಮಿನ ಆಫೀಸಿಗೆ ಫೋನ್ ಮಾಡಿ ವಿಷಯ ತಿಳ್ಸೊನೂತೇಳ್ರೆ ಫೋನ್ ನಂಬರೂ ಗೊತ್ತಿಲ್ಲೆ. ಹಿಂಗೆ ಎಂತ ಮಾಡ್‌ಕೂ ಗೊತ್ತಾಗದೆ ದಿಕ್ಕೇ ತೋಚದಂಗಾತ್. ಅಂತೂ ಬೇರೆ ದಾರಿಯಿಲ್ಲದೆ ಹುಡ್ಕೀ ಹುಡ್ಕೀ ಹುಡ್ಕೀ ಕಡೆಗೂ ಬಂದ್ ಮನೆ ಸೇರ್ತ್.

ಸಾಕಪ್ಪಾ ಈ ಸಿಟಿದ್ ಸಾವಾಸ. ಮನೆಯೊಳಗೆ ಇದ್ದರೆ ಒಂತರ ಕಷ್ಟ. ಹೊರಗೆ ಹೊದರೆ ಇನ್ನೊಂತರ ಕಷ್ಟ. ನಾನಂತೂ ಇನ್ನ್ ಒಂದು ದಿನನೂ ಇಲ್ಲಿ ಇರ್ಪುಲೆ. ನಾಳೆನೇ ಊರುಗೆ ಹೋನೆ. ನೀನ್ ಇರುದಾದರೆ ಇನ್ನೂಸೊಲ್ಪ ದಿನ ಇದ್ದ್ ಬಾ"ತ ಹೆಣ್ಣ್‌ಗೆ ಹೇಳ್ತ್.

"ನಾನ್ ಇಲ್ಲಿ ಇದ್ದ್ ಎಂತ ಮಾಡ್ಸು? ಇಲ್ಲಿಗೆ ಬಂದ್ ನಂಗೂ ಕೈಕಾಲ್ ಕಟ್ಟಿ ಹಾಕಿದಂಗಾವುಟು ಎಂತಾದರ್ ಕೆಲ್ಸ ಮಾಡಿ ಹೊತ್ತು ಕಳಿಯೂನೂತೇಳ್ರೆ ಎಲ್ಲನೂ ಕೆಲ್ಸದವುಳೇ ಮಾಡ್‌ದೆ. ಯಾರಾದರೊಟ್ಟಿಗೆ ಮಾತ್‌ಕತೆಯಾಡಿಕಂಡ್ ಕಾಲಕಳಿನೂತ ಗ್ಯಾನ ಮಾಡ್ರೆ ಮಾತಾಡಿಕೆ ಒಬ್ಬರೂ ಸಿಕ್ಕುದುಲೆ. ಸುಮ್ಮಂಗೆ ಕುದ್ದ್ ನಂಗೂ ಪಿಕಿರಿ ಹಿಡ್‌ದುಟು. ನಾನೂ ನಿಮ್ಮೊಟ್ಟಿಗೆ ಬನ್ನೆತ "ಸೀತನೂ ಹೊರ್ಟತ್. ಮಂಜನೂ ಸೊಸೆನೂ ಎಷ್ಟೇ ಪ್ರಯತ್ನ ಮಾಡಿ ಇನ್ನೂ ಸೊಲ್ಪದಿನ ಒಳ್ಸಿಕಣುವ ಗ್ಯಾನ ಮಾಡ್‌ದೂ ಅವರ ಮಾತ್ ಕೇಳದೆ ಹೋಗಿ ಮೂರೇ ದಿನಲಿ ಹಿಂದಕೆ ತಿರ್ಗಿ ಊರುಗೆ ಬಂದ್‌ಬುಟ್ಟೊ.

— ಚಾಂಗನ ಪಿ.ಪೂವಯ್ಯ, ಮೊಣ್ಣಂಗೇರಿ

## ವಾರ ಭವಿಷ್ಯ

ನನ್ನ ವಾರ ಭವಿಷ್ಯದಲ್ಲಿತ್ತು
ಧನ ಲಾಭ, ಹೊಸ ಗೆಳತಿಯ ಪರಿಚಯ
ವಾರಂತ್ಯದಲ್ಲಿ ವಿಪರೀತ ಖರ್ಚು
ಹಾಗೆಯೇ ಆಗಿತ್ತು
ಹೊಸ ಗೆಳತಿಯ ಪರಿಚಯ
ಆದರೆ, ಆಗಿತ್ತು
ಒಂದೇ ವಾರದಲ್ಲಿ
ಧನ ಲಾಭದ ಬದಲಿಗೆ
ವಿಪರೀತ ಖರ್ಚು

**ಹರೀಶ್ ಹೊಸಮನೆ ಕೆ. ಚೆಟ್ಟಳ್ಳಿ**

## ನಗೆಹನಿಗಳು

ತಂಗ್ಯಮ್ಮಾ : ನೀನ್ ಯಾಗೋಳ್ ರೇಡಿಯೋಲಿ ಬ್ಯಾರೆದೇಶದ ಸ್ಟೇಶನ್ ಕಾರ್ಯಕ್ರಮನ ಯಾಕೇ ಕೇಳಿಯಾ ?

ಅಕ್ಕಯ್ಯ : ಯಾಕೆತೇಳಿರೆ ನಮ್ಮದೇಶದ ಕರೆಂಟ್ ಖರ್ಚ್ ಕಮ್ಮಿ ಆಗಲಿತ.

* * *

ಸ್ನೇಹಿತ : ಅಲ್ಲರ ನೀನ್ ಹಿಂದೆ ಬಹಳ ಲಾಚಾರ್ ಆಗಿದ್ದೆ ಈಗ ಭಾರಿ ದಪ್ಪ ಆಗಿ ಒಳ ಏನ್ ತಿಂದಿಯಾ ?

ಮಂತ್ರಿ : ಅದ್ ನಾನ್ ಜನ್ರ ದುಃಖನ ತಿನ್ನ್‌ತ್ತೋಳೆ

ಸ್ನೇಹಿತ : ಆದ್ರೆ ಜನ ಏನ್ ತಿಂದವೆ ?

ಮಂತ್ರಿ : ಅನ್ಯಾಯನ, ಮಂತ್ರಿ ಹೊಟ್ಟೆನ ಪೂಜಿಕಂಡ್ ಹೇಳ್ತ್

**ಕುರಿಕಡ ಜಾಜಿ, ದೆಹಲಿ.**

**ಶ್ರೀಮಂತರ ಸಂಪತ್ತನ್ನು ನೋಡಿ ಆಸೆ ಪಡುವವರು ನಾವು ಶ್ರೀಮಂತರಾಗ್ಲೆವು**

# ವಿದ್ಯಾವಂತ ನಿರುದ್ಯೋಗಿಗಳಿಗೆ ಮಾರ್ಗದರ್ಶಿ - 4

ತಡಿಯಪ್ಪನ ಕುಮಾರ ಜಯ

(ಹಿಂದಿನ ಸಂಚಿಕೆಯಿಂದ ಮುಂದುವರೆದಿದೆ.)

XI ಗ್ರಾಮೀಣ ಯುವ ಜನತೆಗೆ ಮೀನುಗಾರಿಕೆಯಲ್ಲಿ ತರಬೇತಿ ನೀಡಲಾಗುತ್ತದೆ. ಸಮೀಪದ ಕೆರೆಗಳನ್ನು ಮೀನುಗಾರಿಕೆ ಸಲುವಾಗಿ ಗುತ್ತಿಗೆ ಮೇಲೆ ನೀಡಲಾಗುವುದು. ವೃತ್ತಿ ಪರ ಮೀನುಗಾರರಿಗೆ ಆದ್ಯತೆ ಯ ಮೇಲೆ ಮನೆಗಳನ್ನೂ ಸಹ ನಿರ್ಮಿಸಿ ಕೊಡಲಾಗುತ್ತದೆ.

**ವಿವರಗಳಿಗೆ ಸಂಪರ್ಕಿಸಿ :**

ಡೆಪ್ಯೂಟಿ ಡೈರೆಕ್ಟರ್ ಆಫ್ ಫಿಷರೀಸ್
ನಂ. 891 ಅಹಿಂಸಾ ಲಿಂಕ್ ರಸ್ತೆ,
ಇ ಮತ್ತು ಎಫ್ ಬ್ಲಾಕ್, ಕುವೆಂಪುನಗರ,
ಮೈಸೂರು - 570 023.

XII ಇವಲ್ಲದೆ ವಿವಿಧ ವೃತ್ತಿಗಳಿಗೆ ಸಂಬಂಧಿಸಿದ ತರಬೇತಿ ಪಡೆಯಲು ಈ ಕೆಳಕಂಡವರನ್ನು ಸಂಪರ್ಕಿಸಬಹುದು.

ಕ್ರ. ಸಂ. 1) (ವ್ಯವಸಾಯದ ಬಗ್ಗೆ ತರಬೇತಿಗೆ)
ಡೆಪ್ಯೂಟಿ ಡೈರೆಕ್ಟರ್ ಆಫ್ ಅಗ್ರಿಕಲ್ಚರ್
ನ್ಯೂ. ಪಬ್ಲಿಕ್ ಆಫೀಸರ್ ಓಲ್ಡ್ ಪ್ಯಾಲೆಸ್
ಬಿಲ್ಡಿಂಗ್ ಸಯ್ಯಾಜಿರಾವ್ ರಸ್ತೆ, ಮೈಸೂರು-4

2) (ಮಹಿಳೆಯರ ತರಬೇತಿ ಹಾಗೂ ಸೌಲಭ್ಯಕ್ಕೆ)
ವ್ಯವಸ್ಥಾಪಕರು,
ಕರ್ನಾಟಕ ಮಹಿಳೆ ಹಾಗೂ ಮಕ್ಕಳ ಅಭಿವೃದ್ಧಿ ನಿಗಮ
8ನೇ ಕ್ರಾಸ್, ರಾಮಾನುಜ ರಸ್ತೆ, ಮೈಸೂರು -4

3) (ರೈತರಿಗೆ, ಕೋಳಿ ಸಾಕಾಣಿಕೆ, ತೋಟಗಾರಿಕೆ, ಮೊಲ, ಹಂದಿ, ಹಸು, ಕುರಿ, ಸಾಕಾಣಿಕೆ, ವ್ಯವಸಾಯ ತರಬೇತಿ ಸೌಲಭ್ಯಗಳು)
**ಸಂಪರ್ಕಿಸಿ :** ವಿಸ್ತರಣಾಧಿಕಾರಿ, ಕೃಷಿ ವಿಶ್ವವಿದ್ಯಾಲಯ,
ಹೆಬ್ಬಾಳ್, ಬೆಂಗಳೂರು

4) (ರೇಷ್ಮೆ ಬೇಸಾಯ ಬಗ್ಗೆ ತರಬೇತಿ)
ಸಾರ್ವಜನಿಕ ಸಂಪರ್ಕ ಅಧಿಕಾರಿ,
ಕೇಂದ್ರೀಯ ರೇಷ್ಮೆ ಸಂಶೋದನ ಕೇಂದ್ರ
ಶ್ರೀರಾಂಪುರ, ಮೈಸೂರು.

5) ನಿರ್ದೇಶಕರು ಕರ್ನಾಟಕ ರಾಜ್ಯ ರೇಷ್ಮೆ ಅಭಿವೃದ್ಧಿ ಸಂಸ್ಥೆ
ತಲಘಟ್ಟಪುರ, ಕನಕಪುರ ತಾ||

6) (ಹಸು ಸಾಕಾಣಿಕೆ ಡೈರಿ) ಜೇನು ಸಾಕಾಣಿಕೆ ಬಗ್ಗೆ
ಆಫೀಸರ್ ಇನ್ ಛಾರ್ಜ್, ಕೂಡಿಗೆ ಡೈರಿ ಫಾರ್ಮ್,
ಕುಶಾಲನಗರ, ಕೊಡಗು ಜಿಲ್ಲೆ.

7) (ಕೃಷಿ ತರಬೇತಿ ಬಗ್ಗೆ)
ಪ್ರಿನ್ಸಿಪಾಲ್, ಎಸ್. ಐ. ಇ.
ಇಂಡಸ್ಟ್ರಿಯಲ್ ತರಬೇತಿ ಸಂಸ್ಥೆ
ವಿದ್ಯಾರಣ್ಯಪುರಂ, ಮೈಸೂರು.

8) ಪ್ರಿನ್ಸಿಪಾಲ್, ಇಂಡಸ್ಟ್ರಿಯಲ್ ಟ್ರೈನಿಂಗ್ ಸೆಂಟರ್
ಮೈಸೂರು ಜೈಲ್ ಹತ್ತಿರ
ಅಶೋಕ ರಸ್ತೆ, ಮೈಸೂರು.

9) ಪ್ರಿನ್ಸಿಪಾಲ್, ಸಿ. ಪಿ.ಸಿ. ಪಾಲಿಟೆಕ್ನಿಕ್
(ಯು.ಎನ್. ಓ. ಪ್ರೋಗ್ರಾಂ) ಟ್ರೈನಿಂಗ್ ಪ್ರೋಗ್ರಾಂ,
ಅಶೋಕ ರಸ್ತೆ, ಮೈಸೂರು.

10 (ಪ್ರಿನ್ಸಿಪಾಲ್ (ತಾಂತ್ರಿಕ ತರಬೇತಿ ಬಗ್ಗೆ)
ಚಾಮರಾಜೇಂದ್ರ ಪಾಲಿಟೆಕ್ನಿಕ್ ಇನ್‌ಸ್ಟಿಟ್ಯೂಟ್
ಸಯ್ಯಾಜಿ ರಾವ್ ರಸ್ತೆ, ಮೈಸೂರು

XIII ಅಂಗವಿಕಲ ಯುವಜನತೆಗೆ ಉದ್ಯೋಗಕ್ಕಾಗಿ ಹಾಗೂ ತರಬೇತಿ ಸಲುವಾಗಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

**ವಿವರಗಳಿಗೆ ಸಂಪರ್ಕಿಸಿ :**

ಅಂಗವಿಕಲರ ಕ್ಷೇಮಾಭಿವೃದ್ಧಿ ನಿರ್ದೇಶನಾಲಯ
ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ
ಡಾ||ಅಂಬೇಡ್ಕರ್ ಬೀದಿ, ಬೆಂಗಳೂರು - 560 001

2) ಜಿಲ್ಲಾ ಅಧಿಕಾರಿಗಳು,
ಅಂಗವಿಕಲರ ಕ್ಷೇಮಾಭಿವೃದ್ಧಿ ಇಲಾಖೆ,
ಸಯ್ಯಾಜಿ ರಾವ್ ರಸ್ತೆ, ಬಂಬೂ ಬಜಾರ್, ಮೈಸೂರು

XIV ಯುವ ಮಂಡಳಕ್ಕೆ, ಸ್ವಂತ ಉದ್ಯೋಗ, ಗೃಹ ಕೈಗಾರಿಕೆ, ಹೊಲಿಗೆ, ಹೈನುಗಾರಿಕೆ, ಕೋಳಿ ಸಾಕಾಣಿಕೆ, ಕರಕುಶಲ ವಸ್ತುಗಳ ದುರಸ್ತಿ ಮುಂತಾದವುಗಳ ಬಗ್ಗೆ ಯುವ ಜನರಿಗೆ ತರಬೇತಿ ಮತ್ತು ಪ್ರಾತ್ಯಕ್ಷತೆಗಳನ್ನು ನೀಡಲಾಗುವುದು.

**ವಿವರಗಳಿಗೆ ಸಂಪರ್ಕಿಸಿ :**

ಜಿಲ್ಲಾ ಯುವ ಜನ ಸಮುಸ್ಯಯಾಧಿಕಾರಿಗಳು
ನೆಹರು ಯುವಕೇಂದ್ರ, 2ನೇ ಬ್ಲಾಕ್
ಶ್ರೀರಾಂಪುರ ಬಡಾವಣೆ, ಮೈಸೂರು.

XV ಮೈಸೂರು ನಗರದ ವ್ಯಾಪ್ತಿಗೆ ಬರುವ ಶಾಲಾ ಕಾಲೇಜು ಶಿಕ್ಷಣದಿಂದ ಹೊರಗುಳಿದಿರುವ ನಿರುದ್ಯೋಗಿ ಯುವಕ ಯುವತಿಯರಿಗೆ, ನವಸಾಕ್ಷರು, ಗೃಹಿಣಿಯರು, ಕಾರ್ಮಿಕರು ಹಾಗೂ ಬಾಲ ಕಾರ್ಮಿಕರಿಗೆ ಸ್ವಯಂ ಉದ್ಯೋಗದ ಅವಕಾಶಗಳನ್ನು ಕಲ್ಪಿಸುವ ದೃಷ್ಟಿಯಿಂದ ಅಲ್ಪಕಾಲಾವದಿಯ ಹಾಗೂ ಕಡಿಮೆ ಶುಲ್ಕದ ತರಬೇತಿ ಕಾರ್ಯಕ್ರಮಗಳನ್ನು ಜೆ.ಎಸ್.ಎಸ್. ಶ್ರಮಿಕ ವಿದ್ಯಾಪೀಠದವರು ನಡೆಸುತ್ತಾರೆ. ವಿವರಗಳು ಕೆಳಕಂಡಂತಿವೆ.:-

1. ರೇಡಿಯೋ, ಟೇಪ್‌ರೆಕಾರ್ಡರ್ ಮತ್ತು ಟಿ.ವಿ. ಸರ್ವಿಸಿಂಗ್ (6 ತಿಂಗಳು)
2. ಹೌಸ್ ವೈರಿಂಗ್ ಮತ್ತು ಅಪ್ಲೈಯನ್ಸಸ್ ರಿಪೇರಿ "
3. ಮೋಟಾರ್ ರಿವೈಂಡಿಂಗ್ "
4. ರೆಫ್ರಿಜರೇಷನ್ ಮತ್ತು ಏರ್ ಕಂಡೀಶನಿಂಗ್ "
5. ವಾಚ್ ಮತ್ತು ಟೈಂಪೀಸ್ ಮೆಕ್ಯಾನಿಸ್ "
6. ರೆಕ್ಸಿನ್ ಬ್ಯಾಗ್ ಮತ್ತು ಪರ್ಸ್‌ಗಳ ತಯಾರಿಕೆ "
7. ಡ್ರಾಯಿಂಗ್ ಅಂಡ್ ಪೆಯಿಂಟಿಂಗ್ "
8. ಬ್ಯೂಟೀಶಿಯನ್ ಮಹಿಳೆಯರಿಗೆ ಮಾತ್ರ "
9. ಡ್ರೆಸ್ ಮೇಕಿಂಗ್ "
10. ಅಫ್-ಸೆಟ್ ಪ್ರಿಂಟಿಂಗ್ "
11. ಸಾಕ್ಷರತಾ ಕಾರ್ಯಕ್ರಮ "
12. ಕಾರ್ಪೆಂಟರಿ "
13. ಷೀಟ್ ಮೆಟಲ್ ವರ್ಕ್ಸ್ "
14. ಪ್ರಿಂಟಿಂಗ್ ಅಂಡ್ ಕಂಪೋಸಿಂಗ್ "
15. ಎಂಬ್ರಾಯಿಡರಿ (4 ತಿಂಗಳು)
16. ದ್ವಿಚಕ್ರ ವಾಹನಗಳ ರಿಪೇರಿ "
17. ವುಲ್ಲನ್ ನಿಟ್ಟಿಂಗ್ "
18. ಸ್ಪೋಕನ್ ಇಂಗ್ಲಿಷ್-ಪದವೀಧರರಿಗೆ ಮಾತ್ರ (3 ತಿಂಗಳು)
19. ಡಿಷ್ ಆಂಟೆನಾ ಅಂಡ್ ಕೇಬಲ್ ಟಿ.ವಿ. ಆಪರೇಟ್ಸ್ ಟ್ರೈನಿಂಗ್
20. ಕಲರ್ ಟಿ.ವಿ. ಸರ್ವಿಸಿಂಗ್ "

ಒರಿದು ಪಾಪವ ಮಾಡಿ, ಹರಿವ ನೀರೊಳು ಮುಳುಗೆ ಕರಗೋದೇ ಪಾಪ?

21. ಚೆನ್-ಸೆಟ್ ಮೇಂಟೆನೆನ್ಸ್ "
22. ಹ್ಯಾಂಡಕ್ರಾಫ್ಟ್ (6 ತಿಂಗಳು)
23. ಟೆಸೆಲ್ ವರ್ಕ್ಸ್, ಮಿರರ್ ವರ್ಕ್ಸ್ ಅಂಡ್ ಸ್ಮಾಕಿಂಗ್ "
24. ಜರಿ ವರ್ಕ್ಸ್ "
25. ಡ್ರಾಮ ಅಂಡ್ ಸಿನೆ ಮೇಕಪ್ "
26. ಸ್ಪ್ರೇ ಪೇಯಿಂಟಿಂಗ್ "
27. ಸಬ್‌ಮರ್ಸಿಬಲ್ ಪಂಪ್ ರಿಪೇರಿ "
28. ಗೃಹೋಪಯೋಗಿ ಉಪಕರಣಗಳ ರಿಪೇರಿ (2 ತಿಂಗಳು)
29. ಟೈಪ್‌ರೈಟರ್ಸ್ ರಿಪೇರಿ "
30. ಫ್ಯಾಷನ್ ಮೇಕರ್ ಎಂಬ್ರಾಯಿಡರಿ "
31. ಹೈ ಫ್ಯಾಷನ್ ಗಾರ್ಮೆಂಟ್ಸ್ (ಪೂರ್ಣಕಾಲಿಕ 1½ ತಿಂಗಳು)
32. ಫೋಟೋಗ್ರಫಿ (1 ತಿಂಗಳು)
33. ವೀಡಿಯೋಗ್ರಫಿ "
34. ಸ್ಕ್ರೀನ್ ಪ್ರಿಂಟಿಂಗ್ "
35. ಫ್ಯಾಬ್ರಿಕ್ ಪೆಯಿಂಟಿಂಗ್ "
36. ಬ್ಯಾಂಬೂ ಕ್ರಾಫ್ಟ್ "
37. ಬುಕ್ ಬೈಂಡಿಂಗ್ "
38. ಕೇಸ್ ವರ್ಕರ್ಸ್ ಟ್ರೈನಿಂಗ್ "
39. ಗ್ರೀಟಿಂಗ್ ಕಾರ್ಡ್ಸ್ ಬೈ ಎಂಬ್ರಾಯಿಡರಿ "
40. ಇಕೆಬಾನ (10 ದಿನಗಳು)
41. ಕೈಪಂಪು ಮೆಕ್ಯಾನಿಕ್‌ಗಳ ತರಬೇತಿ (ಪೂರ್ಣಕಾಲಿಕ 10 ದಿನಗಳು)
42. ಗಾರೆ ಕೆಲಸದವರ ತರಬೇತಿ (ಪೂರ್ಣಕಾಲಿಕ 10 ದಿನಗಳು)
43. ಬಾಟಿಕ್ ಪ್ರಿಂಟಿಂಗ್ ಅಂಡ್ ಟೈ ಅಂಡ್ ಡೈ (10 ದಿನಗಳು)
44. ವಾರ್ಡ್ ಬಾಯ್ಸ್ ಮತ್ತು ಆಯಾಗಳ ತರಬೇತಿ "
45. ಉದ್ಯಮಶೀಲತಾ ಅಭಿವೃದ್ಧಿ ತರಬೇತಿ ಕಾರ್ಯಕ್ರಮ "
46. ಉತ್ತರ ಭಾರತದ ತಿನಿಸುಗಳ ತಯಾರಿಕೆ "
47. ದಕ್ಷಿಣ ಭಾರತದ ತಿನಿಸುಗಳ ತಯಾರಿಕೆ (7 ದಿನಗಳು)
48. ಸಾಫ್ಟ್ ಟಾಯ್ಸ್ ಮೇಕಿಂಗ್ "
49. ಚಾಟ್ ತಿನಿಸುಗಳ ತಯಾರಿಕೆ "
50. ಹೌಟು ಯೂಸ್ ಫ್ಯಾಷನ್ ಮೇಕರ್ (5 ದಿನಗಳು)
51. ಹೊಲಿಗೆ ಯಂತ್ರಗಳ ರಿಪೇರಿ "
52. ಮಿಕ್ಸಿ, ಗ್ರೈಂಡರ್ ರಿಪೇರಿ "
53. ಬೇಕಿಂಗ್ "
54. ಹೇರ್ ಸ್ಟೈಲ್ಸ್ "
55. ಮೆಹಂದಿ ತರಬೇತಿ "
56. ಅಗರಬತ್ತಿ ಮೇಕಿಂಗ್ "
57. ಆಫೀಸ್ ಅಸಿಸ್ಟೆಂಸ್ಟ್ (10 ದಿನಗಳು)
58. ಐಸ್‌ಕ್ರೀಂ ತಯಾರಿಕೆ "
59. ಕಮ್ಯುನಿಟಿ ಡೆವಲಪ್‌ಮೆಂಟ್ ಪ್ರೋಗ್ರಾಂ "
60. ಉದ್ಯಮಶೀಲತಾ ಪ್ರೇರಣಾ ತರಬೇತಿ "
61. ಮಹಿಳಾ ಜಾಗೃತಿ ಕಾರ್ಯಕ್ರಮ "
62. ಸೀಮೆಸುಣ್ಣ ತಯಾರಿಕೆ "
63. ಜಾಮ್, ಜ್ಯೂಸ್, ಕೆಚಪ್ ತಾಯರಿಕೆ "
64. ಕ್ಯಾಂಡಲ್, ಫಿನಾಯಿಲ್, ಕ್ಲೀನಿಂಗ್ ಪೌಡರ್ ತಯಾರಿಕೆ (1 ದಿನ)

**ವಿವರಗಳಿಗೆ ಸಂಪರ್ಕಿಸಿ :**
ಜೆ.ಎಸ್. ಎಸ್. ಜನಶಿಕ್ಷಣ ಸಂಸ್ಥೆ,
ನಂ. 1067/1, ವಾಣಿವಿಲಾಸ ರಸ್ತೆ,
ಮೈಸೂರು - 57- 004.

XVI ಗ್ರಾಮೀಣ ಯುವ ಜನತೆ ಸ್ವಾವಲಂಬಿ, ಸ್ವತಂತ್ರ ಜೀವನ ನಡೆಸಲು ಸಹಾಯಕವಾಗುವಂತೆ ರುಡ್‌ಸೆಟ್ ಸಂಸ್ಥೆಯು ಹಲವಾರು ತರಬೇತಿಗಳನ್ನು ನೀಡುತ್ತದೆ. ಶಿಷ್ಯ ವೇತನ ರಹಿತ ತರಬೇತಿ ಅವಧಿಯಲ್ಲಿ ಊಟ, ತಿಂಡಿ ಮತ್ತು ವಸತಿ ಉಚಿತವಾಗಿರುತ್ತದೆ. ಕೃಷಿ ಸಂಬಂಧ, ತಾಂತ್ರಿಕ ಹಾಗೂ ವ್ಯಾಪಾರಿಕ, ಕೈಗಾರಿಕೆ ಉದ್ಯಮಶೀಲತಾ ತರಬೇತಿ ನೀಡಲಾಗುವುದು. ತರಬೇತಿ ನಂತರ ಸ್ವುದ್ಯೋಗನಿರತರಾಗಲು ಬ್ಯಾಂಕುಗಳಿಂದ ಕಡಿಮೆ ಬಡ್ಡಿದರದಲ್ಲಿ ಸಾಲ ವ್ಯವಸ್ಥೆ ಕಲ್ಪಿಸಲಾಗುವುದು.

**ವಿವರಗಳಿಗೆ ಸಂಪರ್ಕಿಸಿ :**
ನಿರ್ದೇಶಕರು,
ರುಡ್‌ಸೆಟ್ ಸಂಸ್ಥೆ, ಗ್ರಾಮಾಭಿವದ್ಧಿ ಮತ್ತು ಸ್ವುದ್ಯೋಗ ತರಬೇತಿ ಕೇಂದ್ರ, ಮುಖ್ಯ ರಸ್ತೆ ಹಿನಕಲ್, ಮೈಸೂರು 570 017.

XVII ವಿಜ್ಞಾನ ಮತ್ತು ತಂತ್ರ ಜ್ಞಾನದಲ್ಲಿ ಅವಿಷ್ಕಾರಗಳು ಉಂಟಾದಂತೆ ಕೈಗಾರಿಕಾ ವಲಯದಲ್ಲಿ ಕ್ರಾಂತಿ ಉಂಟಾಗಿದೆ. ಇಂತಹ ತಂತ್ರಜ್ಞಾನವನ್ನು ಬೇರು ಮಟ್ಟದ ಯುವ ಜನತೆಗೆ ಮುಟ್ಟಿಸಲು SJCE-STEP ಸಂಸ್ಥೆ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

**ವಿವರಗಳಿಗೆ ಸಂಪರ್ಕಿಸಿ :**
ನಿರ್ದೇಶಕರು
SJCE-STEP ಮಾನಸಗಂಗೋತ್ರಿ
ಮೈಸೂರು - 570 006.

XVIII. ಮಹಿಳಾ ಶಕ್ತಿವರ್ಧನೆ, ನೀರು ನಿರ್ವಹಣೆ, ಕಾನೂನು ಶಿಕ್ಷಣ, ವಿಕಾಸ ಪ್ರಗತಿಶೀಲ ತರಬೇತಿ ಹಾಗೂ ಸ್ವ ಉದ್ಯೋಗ, ಸಣ್ಣುಳಿತಾಯ ಪ್ರೇರಣೆ, ಮುಂತಾದ ಉನ್ನತ ಮಟ್ಟದ ಗುರಿಯನ್ನು ಹೊಂದಿರುವ ಆರ್ಗನೈಸೇಶನ್ ಫಾರ್ ಡೆವಲಪ್‌ಮೆಂಟ್ ಆಫ್ ಪೀಪಲ್ (ODP) ಸಂಸ್ಥೆ ಸಹ ಹಲವಾರು ತರಬೇತಿಗಳನ್ನು ಯುವ ಜನತೆಗೆ ವಿಶೇಷವಾಗಿ ಮಹಿಳೆಯರಿಗೆ ಏರ್ಪಡಿಸುತ್ತದೆ.

**ವಿವರಗಳಿಗೆ ಸಂಪರ್ಕಿಸಿ : ಕಾರ್ಯದರ್ಶಿಗಳು**
ಒಡಿಪಿ ಸಂಸ್ಥೆ, ಬನ್ನಿಮಂಟಪ
ಲೇಔಟ್, ಮೈಸೂರು - 570 015

XIX ಶಿಕ್ಷಣ, ಆರೋಗ್ಯ ಹಾಗೂ ಮಕ್ಕಳ ಸಮುದಾಯ ಅಭಿವೃದ್ಧಿಯ ಗುರಿಹೊಂದಿರುವ ENEDSA (ಎನೆಡ್ಸಾ)ಸಂಸ್ಥೆಯಲ್ಲಿ ಗ್ರಾಮೀಣ ರೈತರಿಗೆ ಕೃಷಿಕ ತರಬೇತಿ, ಎಂಟ್ರಪ್ರೀನರ್‌ಶಿಪ್ ಅಭಿವೃದ್ಧಿ ಕಾರ್ಯಕ್ರಮಗಳು ನೇಕಾರಿಕೆ ತರಬೇತಿ, ಮುಂತಾದುವುಗಳನ್ನು ನೀಡಲಾಗುವುಧ.

**ವಿವರಗಳಿಗೆ ಸಂಪರ್ಕಿಸಿ :**
ಎನೆಡ್ಸಾ
ಅಂಚೆ ಪೆಟ್ಟಿಗೆ ಸಂಖ್ಯೆ 313
ನಂ. 23, 3ನೇ ಹಂತ, ಇಂಡಸ್ಟ್ರಿಯಲ್ ಸಬರ್ಬ್
ಮೈಸೂರು - 570 008.

ಆ ತಾಲ್ಲೂಕಿನ ಬಡ ಜನತೆಗೆ ದೊರೆಯುವ ಸಾಮಾಜಿಕ ಸೌಲಭ್ಯಗಳ ವಿವರ

**1) ಕಿವಿ ತೊಂದರೆಗಳು :**

1) ಶ್ರೀ ಕೃಷ್ಣರಾಜೇಂದ್ರ ಆಸ್ಪತ್ರೆ
ಸಯ್ಯಾಜಿರಾವ್ ರಸ್ತೆ, ಮೈಸೂರು - 570 001.
2) ಆಲ್ ಇಂಡಿಯಾ ಇನ್ಸ್‌ಟಿಟ್ಯೂಟ್ ಆಫ್
ಸ್ಪೀಚ್ ಅಂಡ್ ಹಿಯರಿಂಗ್, ಮಾನಸ ಗಂಗೋತ್ರಿ
ಮೈಸೂರು - 570 006.

19ನೇ ಪುಟಕ್ಕೆ

**ಜನಗಳ ಆರೋಗ್ಯವೇ ಜನಾಂಗದ ಅಭಿವೃದ್ಧಿ**

# ವನಿತಾಲೋಕ : ಗೃಹಸಂಗಾತಿ

## ಟೊಮೊಟೋವಿನ ಗ್ರೇವಿ (Curry)

**ಬೇಕಾಗುವ ಸಾಮಾನು :** 250 ಗ್ರಾಂ ಟೊಮೊಟೊ, 2½ ಊ. ಚ. ಕಡಲೆ ಹಿಟ್ಟು ಇಲ್ಲವೆ ಬಟಾಣಿ ಹಿಟ್ಟು, ½ ಕಪ್ ತೆಂಗಿನ ಹಾಲು, 1 ಊ.ಚ. ಜೀರಿಗೆ, 1 ಈರುಳ್ಳಿ (ಹೆಚ್ಚಿ), 3 (ಇಲ್ಲವೆ ರುಚಿಗೆ ಬೇಕಾಗುವಷ್ಟು) ಹಸಿ ಮೆಣಸಿನ ಕಾಯಿ (ಹೆಚ್ಚಿ), 1 ಊ. ಚ. ತುಪ್ಪ.

**ವಿಧಾನ :** ಟೊಮೊಟವನ್ನು ಹೋಳುಮಾಡಿ ಕತ್ತರಿಸಿ, ತೆಂಗಿನ ಕಾಯಿಯನ್ನು ಹೆರೆದು ರುಬ್ಬಿ ½ ಕಪ್ ಹಾಲು ಹಿಂಡಿ ತೆಗೆಯಿರಿ. ಬಾಣಲೆಯಲ್ಲಿ ತುಪ್ಪ ಕಾಯಿಸಿ ಅದಕ್ಕೆ ಜೀರಿಗೆ ಹಾಗೂ ಈರುಳ್ಳಿ ಹಾಕಿ ಲಘು ಕಂದು ಬಣ್ಣಕ್ಕೆ ಬರುವ ತನಕ ಕರಿಯಿರಿ. ಅದಕ್ಕೆ ಹಸಿ ಮೆಣಸಿನ ಕಾಯಿ ಮತ್ತು ಟೊಮೊಟೊ ಹಾಕಿ ಇನ್ನೂ ಸ್ವಲ್ಪ ಕಾಲ ಹುರಿಯಿರಿ. ಹಿಟ್ಟಿಗೆ ನೀರು ಸೇರಿಸಿ ಕಣಕ ತಯಾರಿಸಿ, ಅದನ್ನು ಗ್ರೇವಿಗೆ ಹಾಕಿ ಕೆದಕಿ ಬೇಯಿಸಿ. ಕೊನೆಗೆ ತೆಂಗಿನ ಹಾಲು ಹಾಕಿ ಬೇಯಿಸಿ ಕುದಿಸಿ ಕೆಳಗಿಳಿಸಿ.

## ಹಸಿ ಬಾಳೆ ಕಾಯಿ ಉಂಡೆ ಗ್ರೇವಿ (Curry)

**ಬೇಕಾಗುವ ಸಾಮಾನು:** ಬಾಳೆಕಾಯಿ ಉಂಡೆ ಮಾಡಲಿಕ್ಕೆ, 2 ಹಸಿ (ಅಡುಗೆ ಪದಾರ್ಥದ) ಬಾಳೆಕಾಯಿ, 3 ಎಡತರ ಗಾತ್ರದ ಬಟಾಟೆ (ಆಲೂಗೆಡ್ಡೆ), 1 ದೊಡ್ಡ ಈರುಳ್ಳಿ, (ಹೆಚ್ಚಿ), 3 ಹಸಿ ಮೆಣಸಿನ ಕಾಯಿ (ಹೆಚ್ಚಿ), 1 ಊ.ಚ. ಕಡ್ಲೆ ಹಿಟ್ಟು, ½ ಟೀ.ಚ. ಒಣ ಮೆಣಸಿನ ಪುಡಿ, ½ ಟಿ. ಚ. ಅರಸಿನ ಪುಡಿ, ಸ್ವಲ್ಪ ಕೊತ್ತಂಬರಿ ಸೊಪ್ಪು (ಹೆಚ್ಚಿ), ಹುರಿಯಲಿಕ್ಕೆ ಎಣ್ಣೆ.

ಬಾಳೆಕಾಯಿ ಹಾಗೂ ಬಟಾಟೆಗಳನ್ನು ಬೇಯಿಸಿ ಆರಿದ ನಂತರ ಸಿಪ್ಪೆ ಸುಲಿದು ಒಟ್ಟಿಗೆ ಸೇರಿಸಿ, ಜಜ್ಜಿ ಇಟ್ಟುಕೊಳ್ಳಿ, ಹಸಿ ಮೆಣಸಿನ ಕಾಯಿ (ಹೆಚ್ಚಿ), ಈರುಳ್ಳಿ ( ಹೆಚ್ಚಿ), ಕೊತ್ತಂಬರಿ ಸೊಪ್ಪು ( ಹೆಚ್ಚಿ) ಒಣ ಮೆಣಸಿನ ಪುಡಿ ಮತ್ತು ಅರಸಿನ ಇವುಗಳನ್ನು ಬಾಳೆಕಾಯಿ ಬಟಾಟೆಯ ಮಿಶ್ರಣಕ್ಕೆ ಹಾಕಿ ಚೆನ್ನಾಗಿ ಬೆರಸಿ ಜಜ್ಜಿ, ನಂತರ ಉಂಡೆ ಮಾಡಿ ಅವುಗಳನ್ನು ಎಣ್ಣೆಯಲ್ಲಿ ಮುಳುಗಿಸಿ ಕರಿಯಿರಿ. ಅವು ಕಂದು ಬಣ್ಣಕ್ಕೆ ಬರುವಾಗ ಬಸಿದು ಇಟ್ಟುಕೊಳ್ಳಿ.

**ಗ್ರೇವಿ ಪದಾರ್ಥ ಮಾಡಲಿಕ್ಕೆ :** 1 ಎಡತರ ಗಾತ್ರದ ಈರುಳ್ಳಿ (ಹೆಚ್ಚಿ), 5 ಹಸಿ ಮೆಣಸಿನ ಕಾಯಿ, 2 ಎಡತರ ಗಾತ್ರದ ಟೊಮೊಟೊ (ಕತ್ತರಿಸಿ ಹೋಳು ಮಾಡಿ), ಸ್ವಲ್ಪ ಕೊತ್ತಂಬರಿ ಸೊಪ್ಪು, 2-3 ಕರಿ ಬೇವಿನ ಎಲೆ, 10 ಹಿಳಕು ಬೆಳ್ಳುಳ್ಳಿ, 1 ಟೀ. ಚ. ಗರಂ ಮಸಾಲ ಪುಡಿ, 1 ಊ.ಚ. ಕೊತ್ತಂಬರಿ ಚೂರ್ಣ, ½ ಕಪ್ ತುಪ್ಪ ಅಥವಾ ಎಣ್ಣೆ, ರುಚಿಗೆ ಬೇಕಾಗುವಷ್ಟು ಉಪ್ಪು.

ಈರುಳ್ಳಿಯನ್ನು (ಹೆಚ್ಚಿ) ಎಣ್ಣೆ ಇಲ್ಲವೆ ತುಪ್ಪದಲ್ಲಿ ಕರಿಯಿರಿ. ಅದಕ್ಕೆ ಕೊತ್ತಂಬರಿ ಚೂರ್ಣ ಹಾಗೂ ಗರಂಮಸಾಲೆ ಪುಡಿ ಸೇರಿಸಿ ಎಣ್ಣೆ ಬೇರ್ಪಡಿಸುವ ತನಕ ಕರಿಯಿರಿ. ಆ ಮೇಲೆ ಟೊಮೆಟೊ. ಕರಿಬೇವಿನ ಎಲೆ, ಬೆಳ್ಳುಳ್ಳಿ (ಜಜ್ಜಿ) ಇವುಗಳನ್ನು ಹಾಕಿ ಅದಕ್ಕೆ 1 ಕಪ್ ನೀರು ಸೇರಿಸಿ 15 ನಿಮಿಷಗಳ ಕಾಲ ಮರಳಿಸಿ ಬೇಯಿಸಿ. ಈಗ ಬಾಳೆಕಾಯಿ ಉಂಡೆ ಹಾಕಿ ಕೆಲವು ನಿಮಿಷಗಳ ಕಾಲ ಬೇಯಿಸಿ ಕೆಳಗಿಳಿಸಿ. ಅದರ ಮೇಲೆ ಕೊತ್ತಂಬರಿ ಸೊಪ್ಪು (ಹೆಚ್ಚಿ) ಸಿಂಪಡಿಸಿ.

## ಬಟಾಣಿ ಮಸಾಲೆ

**ಬೇಕಾಗುವ ಸಾಮಾನು :** ½ ಪಾವು ಬಟಾಣಿ ಕಾಳು, 1 ಟೀ. ಚ. ಕೊತ್ತಂಬರಿ ಬೀಜ, 4 ಲವಂಗ, 2 ದಾಲ್ಚಿನ್ನಿ, 6 ಕೆಂಪು ಮೆಣಸಿನ ಕಾಯಿ, ಅರ್ಧ ಅಂಗುಲ ಶುಂಠಿ, 1 ಕಟ್ಟು ಪುದಿನ, 1 ಈರುಳ್ಳಿ ¼ ಟೀ. ಚ. ಸೋಂಪು, 2 ಊ. ಚ. ಎಣ್ಣೆ.

**ವಿಧಾನ :** ಬಟಾಣಿ ಕಾಳನ್ನು ಬೇಯಿಸಿ, ಮೇಲಿನ ಎಲ್ಲಾ ಸಾಮಾನುಗಳನ್ನು ನುಣ್ಣಗೆ ರುಬ್ಬಿಕೊಳ್ಳಿ, ಒಲೆಯ ಮೇಲೆ ಎಣ್ಣೆ ಇಟ್ಟು, ಅದು ಕಾದ ಮೇಲೆ ರುಬ್ಬಿದ ಮಸಾಲೆ ಹಾಕಿ ಚೆನ್ನಾಗಿ ಕರಿಯಿರಿ. ನಂತರ ಬೇಯಿಸಿದ ಕಾಳು, ಉಪ್ಪು ಸೇರಿಸಿ ಕುದಿಸಿ.

## ನುಗ್ಗೆ ಕಾಯಿ- ಹಸಿ ಮಾವಿನ ಕಾಯಿ ಕರಿ (Curry)

**ಬೇಕಾಗುವ ಸಾಮಾನು :** 4 ನುಗ್ಗೆಕಾಯಿ, ½ ಟೀ.ಚ. ಸಾಸಿವೆಕಾಳು, 1 ಹಸಿ ಮಾವಿನ ಕಾಯಿ, 2-3 ಕರಿಬೇವಿನ ಎಲೆ, ¼ ಟೀ.ಚ. ಅರಸಿನ ಪುಡಿ.

**ಮಸಾಲೆ ಅರೆಯಲಿಕ್ಕೆ :** ½ ತೆಂಗಿನ ಕಾಯಿ, 6 ಹಸಿ ಮೆಣಸಿನಕಾಯಿ, 6 ಹಿಳಕು ಬೆಳ್ಳುಳ್ಳಿ, ½ ಟೀ. ಚ. ಅರಸಿನಪುಡಿ, ¼ ಟೀ. ಚ. ಜೀರಿಗೆ.

**ವಿಧಾನ :** ಮಸಾಲೆಯನ್ನು ಅರೆಯಿರಿ. ನುಗ್ಗೆ ಕಾಯಿ ಹಾಗೂ ಮಾವಿನ ಕಾಯಿಗಳನ್ನು ಕತ್ತರಿಸಿ ಅರೆಯಿರಿ. ನುಗ್ಗೆ ಕಾಯಿ ಹಾಗೂ ಮಾವಿನ ಕಾಯಿಗಳನ್ನು ಕತ್ತರಿಸಿ ತುಂಡು ಮಾಡಿ ಅವುಗಳಿಗೆ ¼ ಟೀ. ಚ. ಅರಸಿನ ಪುಡಿ ಹಾಗೂ ರುಚಿಗೆ ಬೇಕಾಗುವಷ್ಟು ಉಪ್ಪು ಮತ್ತು ಬೇಕಾಗುವಷ್ಟು ನೀರು ಸೇರಿಸಿ ಕುದಿಯುವಂತೆ ಬೇಯಿಸಿ. ಈಗ ಮಸಾಲೆಯ ಕಣಕ ಸೇರಿಸಿ ಸ್ವಲ್ಪ ನಿಮಿಷಗಳ ಕಾಲ ಕೆದಕುತ್ತಾ ಬೇಯಿಸಿ. ಸಾಸಿವೆಕಾಳು ಮತ್ತು ಕರಿ ಬೇವಿನ ಎಲೆ ಇವುಗಳನ್ನು ತುಪ್ಪದಲ್ಲಿ ಕರಿದು ಗ್ರೇವಿಗೆ ಹಾಕಿ ಒಗ್ಗರಣೆ ಕೊಡಿ.

- ಗೃಹಸಂಗಾತಿ

---

## ನೆಂಟರು

ಇದ್ದರು ಜೊತೆಯಲ್ಲಿ ಇರಲಾರರು
ಕೊನೆಯ ಗಳಿಗೆಯಲ್ಲಿ ಅವರ್‍ಯಾರು ಗೊತ್ತೆ?
ಇದ್ದಾಗ ಹಣ, ಮುತ್ತುವರು ಇರುವೆಯ ಹಾಗೆ
ಇಲ್ಲದಿದ್ದಾಗ ಮಾಯವಾಗುವರು
ಕಂಡು ಕಾಣದ ಹಾಗೆ ಅವರ್‍ಯಾರು ಗೊತ್ತೆ?
ಕೆಳಗಿದ್ದಾಗ ಕೀಳಾಗಿ ನೋಡುವರು
ಮೇಲೆ ಬಂದಾಗ ಕಾಲೆಳೆಯುವರು
ಅವರ್‍ಯಾರು ಗೊತ್ತೆ?
ಅವರೇ ಅವರು...
ರಕ್ತ ಸಂಬಂಧವೆಂಬ ನಂಟನ್ನು
ಹೊಂದಿರುವ ನೆಂಟರು.

- ಕೂರನ ವಿನು, ಮೈಸೂರು.

---

ಪ್ರತ್ಯಕ್ಷ ಕಂಡರೂ ಪ್ರಮಾಣಿಸಿ ನೋಡಬೇಕು

# ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯಿಂದ ವಿವಿಧ ಸ್ಪರ್ಧೆಗಳು

ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ವತಿಯಿಂದ ೧೫.೮.೨೦೦೦ ರಂದು ಮಡಿಕೇರಿಯ ಗೌಡ ಸಮಾಜದಲ್ಲಿ ಜನಾಂಗ ಬಾಂಧವರಿಗಾಗಿ ದೇಶಭಕ್ತಿಗೀತೆ, ಜಾನಪದ ಗೀತೆ, ಭಾವಗೀತೆ ಮತ್ತು ಸೋಬಾನೆ ಹಾಡಿನ ಸ್ಪರ್ಧೆ ಏರ್ಪಡಿಸಲಾಗಿತ್ತು. ಈ ಸ್ಪರ್ಧೆಗಳಲ್ಲಿ ವಿಜೇತರಾದವರ ಹೆಸರು ಕೆಳಗಿನಂತಿದೆ.

ಪ್ರಾಥಮಿಕ ಶಾಲಾ ವಿದ್ಯಾರ್ಥಿನಿಯರ ವಿಭಾಗದಲ್ಲಿ ಪ್ರಥಮ ಸ್ಥಾನ ಬಾರಿಕೆ ಹರ್ಷಿತ ಅಯ್ಯಪ್ಪ, ದ್ವಿತೀಯ ಬಾಕಿಲನ ಮೈನಾ ಪೂಣಚ್ಚ, ತೃತೀಯ ಮಂಞಂಡ್ರ ಮಿಲನ್ ಉಲ್ಲಾಸ್, ವಿದ್ಯಾರ್ಥಿಗಳ ವಿಭಾಗದಲ್ಲಿ ಪ್ರಥಮ ಕಾಳೇರಮ್ಮನ ಕವನ್ ಪೊಣ್ಣಪ್ಪ, ದ್ವಿತೀಯ ಸೂದನ ಶಿಶಿರ್ ಪೂಣಚ್ಚ, ತೃತೀಯ ಸ್ಥಾನವನ್ನು ಮಂಞಂಡ್ರ ದರ್ಶನ್ ಉಲ್ಲಾಸ್ ಪಡೆದುಕೊಂಡಿದ್ದಾರೆ.

ಪ್ರೌಢ ಶಾಲಾ ವಿದ್ಯಾರ್ಥಿನಿಯರ ವಿಭಾಗದಲ್ಲಿ ಪ್ರಥಮ ಕೋಳಿಮುಡಿಯನ ನೂತನ ಅನಂತ್‌ಕುಮಾರ್, ದ್ವಿತೀಯ ಅಂಬೆಕಲ್ಲು ಜಾಹ್ನವಿ ಪುಟ್ಟಣ್ಣಗೌಡ, ತೃತೀಯ ಯಾಲದಾಳು ಕಾಂತಿ ಶಿವಪ್ಪ, ವಿದ್ಯಾರ್ಥಿಗಳ ವಿಭಾಗದಲ್ಲಿ ಪ್ರಥಮ ಕಾನೆಹಿತ್ಲು ಚೇತನ್ ಕಾಳಪ್ಪ, ದ್ವಿತೀಯ ನೈಯಣೆ ಸುಕಿ ತಾರೇಂದ್ರ, ತೃತೀಯ ಗೋವಿಂದಮ್ಮನ ವೊನೇಷ್ ಚಂಗಪ್ಪ ಇವರು ಪಡೆದುಕೊಂಡಿದ್ದಾರೆ.

ಮಹಿಳೆಯರ ವಿಭಾಗದಲ್ಲಿ ಪ್ರಥಮ ಅಮೆಮನೆ ಅಹಲ್ಯ ಸುಭಾಷ್, ದ್ವಿತೀಯ ಮಂಞಪುರ ಗಾನಶ್ರುತಿ. ತೃತೀಯ ಆಜಡ್ಕ ಸಾವಿತ್ರಿ ರಾಘವಯ್ಯ, ಪುರುಷರ ವಿಭಾಗದಲ್ಲಿ ಪ್ರಥಮ ಮೇಲಿಬಾಡು ಚರಣ್‌ರಾಜ್ ರವಿ, ದ್ವಿತೀಯ ಅಚ್ಚಲ್‌ಪಾಡಿ ತಿಲಕ್ ಬೋಜಪ್ಪ; ತೃತೀಯ ಗೌಡದಾರೆ ಗೋಪಾಲ ಇವರು ಪಡೆದುಕೊಂಡಿದ್ದಾರೆ.

ಮಹಿಳೆಯರ ಸೋಬಾನೆ ಸ್ಪರ್ಧೆಯಲ್ಲಿ ಪ್ರಥಮ ಕಡ್ಲೇರ ಯಶೋದಾ ಉಲ್ಲಾಸ್, ದ್ವಿತೀಯ ಯಾಲದಾಳು ಪೂವಮ್ಮ ತಿಮ್ಮಯ್ಯ, ತೃತೀಯ ಅಮೆಮನೆ ಅಹಲ್ಯಾ ಸುಭಾಷ್ ಇವರು ಪಡೆದುಕೊಂಡಿದ್ದಾರೆ.

ವಿಜೇತರಿಗೆ ಬಹುಮಾನಗಳನ್ನು ದಾನಿಗಳಾದ ಕುಯ್ಯಮುಡಿ ಕೆ. ಪೂರ್ಣಯ್ಯ, ಸೂರ್ತಲೆ ಸೋಮಣ್ಣ, ಪುಳಿಕಂಡ ಮುತ್ತಪ್ಪ, ಪೊನ್ನೇಟಿ ಶಾಂತಿ ಪೊನ್ನಪ್ಪ, ಕುಂಬುಗೌಡನ ರವಿ, ಕುಂಬುಗೌಡನ ರಘು, ಬೈತಡ್ಕ ಜಾನಕಿ ಬೆಳ್ಯಪ್ಪ ಮೊದಲಾದವರು ನೀಡಿದರು.

ಈ ಸಂದರ್ಭದಲ್ಲಿ ಅಕಾಡೆಮಿಯ ಅಧ್ಯಕ್ಷರಾದ ತುಂತಜೆ ಗಣೇಶ್ ಮತ್ತು ಸಮಿತಿಯವರಾದ ಕೋಡಿ ಚಂದ್ರಶೇಖರ್ ಮಂಞಂಡ್ರ ರೇಖಾ ಉಲ್ಲಾಸ್, ಕುಂಜಿಲನ ಸತೀಶ್ ಪೂಣಚ್ಚ, ನೈಯಣೆ ಹೇಮಲತಾ ತಾರೇಂದ್ರ, ಬೈತಡ್ಕ ಅರುಣ್ ಕುಮಾರ್, ಕೊಂಪುಳಿರ ಗಣೇಶ್ ಬೋಪಯ್ಯ, ಕರಕರನ ಉತ್ತಯ್ಯ, ಮೊಟ್ಟಿನ ಅಮುಲ್ ದೇವಯ್ಯ, ಚೆಟ್ಟಿಮಾಡ ರಘುಪತಿ, ಮತ್ತು ಜಿಲ್ಲಾ ಪಂಚಾಯತ್ ಸದಸ್ಯ ಹೊಸೂರು ಸತೀಶ್‌ಕುಮಾರ್ ಭಾಗವಹಿಸಿದ್ದರು.

ಸ್ಪರ್ಧೆಗಳ ತೀರ್ಪುಗಾರರಾಗಿ ಕೊಡಗು ಗೌಡ ಮಹಿಳಾ ಒಕ್ಕೂಟದ ಅಧ್ಯಕ್ಷೆ ಚೀಯಂಡಿರಾಧಾ ಯಾದವ್, ನಾರಾಯಣ ಗೌಡ, ಹಾರಂಬಿ ರವಿಕುಮಾರ್ ಭಾಗವಹಿಸಿದ್ದರು.

— ಸಂಗಾತಿ ವರದಿ

---

## ಬೋಟಿದ್ ಗೂಡೆ ಬ್ಯಾಟೆ

ನನ್ನ ಫ್ರೆಂಡ್ ಬಿದ್ದಪ್ಪನ ನಾವು" ಬೋಟಿ"ತ ಕರಿಯದು ಅಂವ ಒಂದಿನ ಬ್ಯಾಜರದ ಮುಖ ಮಾಡಿಕಂಡ್ ವೈದ್ಯನಲ್ಲಿಗೆ ಹೋತ್. "ಡಾಕ್ಟ್ರೆ ನೀವ್ ನಂಗೆ ಸಹಾಯ ಮಾಡದೋದ್ರೆ ನಾ ಸತ್ತೋನೆ, ಹಿಂಗೇ ಎಷ್ಟ್ ದಿನತ ತಡ್‌ಕಂಡ್ ಇರ್ದು ಹೇಳಿ?" ತ ಡಾಕ್ಟ್ರ ಹತ್ರ ಹೇಳ್ಯಾಕನ, "ನಿಮ್ಮ ಪ್ರಾಬ್ಲಂ ಎಂತ ಮೊದಲು ಹೇಳಿ"ತ ಡಾಕ್ಟರ್ ಕೇಳ್ತ್. "ನಂಗೆ 35 ವರ್ಷ ಆದ್ರೂನೂ ಇದುವರೆಗೆ ನನ್ನ ಯಾವ ಗೂಡೆನೂ ಪ್ರೀತಿ ಮಾಡ್ತ್‌ಲೆ. ನಾನೇ ಅವರ್ನ ಮಾತಾಡ್ಸಿಕೆ ನೋಡ್‌ಕಾಕನ ಅವು ಮಾರ್‌ದೂರ ಓಡಿವೆ? ಎಂತ ಮಾಡ್ದು ಹೇಳಿ? ನಂಗೆ ಇದ್ರಿಂದ ಬಾರೀ ಬ್ಯಾಜರ ಆಗುಟ್ಟು". ಡಾಕ್ಟರ್ ಅಂವ ಹೇಳ್ದನೆಲ್ಲಾ ಕೇಳಿಬುಟ್ಟ್ ಹೇಳ್ತ್: "ಇದೇನ್ ಬಾರಿ ಪ್ರಾಬ್ಲಂ ಅಲ್ಲ. ನಿಮಿಗೆ ನಿಮ್ಮ ಮೇಲೆ ಕಾನ್‌ಫಿಡೆನ್ಸ್ ಇರೋಕು ಅಷ್ಟೆ. ನೋಡಿ ನೀವ್ ನಾ ಹೇಳುವಂಗೆ ಮಾಡಿ ಆತಾ? ದಿನಾ ಬೆಳಿಗ್ಗೆ ಎದ್ದ ತಕ್ಷಣ ನಿಮ್ಮ ಕೋಣೆಲಿರುವ ಕನ್ನಡಿ ಮುಂದೆ ನಿತ್ತ್, ನಾನ್ ಬಾರಿ ತಮಾಷೆ ಮನ್ಸ, ಸುಂದರ ಪುರುಷ, ನಾನ್ ಯಾರಿಗಿಂತ ಏನ್ ಕಡಿಮೆ ಇಲ್ಲೆ, ನಾನ್ ಒಳ್ಳೆಯ ಮನ್ಸ-ತೇಳಿ ದೃಢಸಂಕಲ್ಪ ಮತ್ತೆ ಆತ್ಮವಿಶ್ವಾಸಂದ ಹೇಳಿಕಂಡ ಮ್ಯಾಲೆ ನಿಮ್ಮ ಬೇರೆ ದಿನಚರಿಗಳ್ನ ಶುರುಮಾಡಿ. ಒಂದ್ ತಿಂಗಳೊಳಗೆ ನಿಮ್ಮ ಗೂಡೆ ಬ್ಯಾಟೆ Success ಆಗದಿದ್ರೆ ನೋಡಿ ಮತ್ತೆ".

ಇದ್ನ ಕೇಳಿ ಬೋಟಿಗೆ ಬಾರೀ ಖುಷಿ ಆಗಿ ಅಂವ ಹೊಸ ಹುರುಪ್‌ಂದ ಮನೇಗೆ ಹೋತ್. ಆದ್ರೆ ಒಂದ್ ತಿಂಗ ಆದ ಮ್ಯಾಲೆ ಪುನಃ ಸಗಣಿ ತಿಂದವನಂಗೆ ಮುಖ ಮಾಡಿಕಂಡ್ ಡಾಕ್ಟರ ಹತ್ರ ಬಾತ್.

"ನಾನ್ ಹೇಳಿಕೊಟ್ಟ formula work ಆತ್‌ಲೆಯಾ?" ಡಾಕ್ಟರ್ ಕೇಳ್ತ್. "1st ಕ್ಲಾಸ್ ಆಗಿ work ಆತ್ ಡಾಕ್ಟ್ರೆ" ಬೋಟಿ ಹೇಳ್ತ್" ಕಳೆದ 2-3 ವಾರಗಳ್ಲಿ ನಾನ್ ಲೈಫ್‌ಲೇ ಮಾಡದಷ್ಟ್ ಸಾಧನೆಗಳ್ನ ಮಾಡಿಬುಟ್ಟೆ. ಸುಮಾರ್ ಗೂಡೆಗಳ್ನ ಹೆಂಗಸರ್ನ ಪರಿಚಯ ಮಾಡಿಕಂಡೊಳೆ."

"ಮತ್ತೆ ಪ್ರಾಬ್ಲಂ ಎಂತ ನಿಮ್ಮದ್?" ಡಾಕ್ಟರ್ ಆಶ್ಚರ್ಯಲಿ ಕೇಳ್ತ್.

"ನಂದೆಂತ ಪ್ರಾಬ್ಲಂ ಇಲ್ಲೆ. ನನ್ನ ಹೆಣ್ಣ್‌ದೇ ಬಾರೀ ಪ್ರಾಬ್ಲಂ ಈಗ?"

— ಎಡಿಕೇರಿ ಸುದರ್ಶನ್, ಬೆಂಗಳೂರು

---

ಗುಣ ತಿಳಿದು ಗೆಳೆತನ ಮಾಡು

# ಪ್ರಾಣಿಗಳು ಎಷ್ಟು ವೇಗದಲ್ಲಿ ಓಡುತ್ತವೆ?

ಈಗ್ಗೆ ಕೆಲವು ವರ್ಷಗಳ ಹಿಂದೆ, ಅಮೆರಿಕಾದಿಂದ ವಿಜ್ಞಾನಿ ಹಾಗೂ ಸಂಶೋಧಕ ರಾಯ್ ಚ್ಯಾಪ್‌ಮನ್ ಆ್ಯಂಡ್ರೂಸ್ ಅವರ ನೇತೃತ್ವದಲ್ಲಿ ಸಾಹಸಿಗಳ ತಂಡವೊಂದು ಭಾರತಕ್ಕೆ ಬಂದಿತ್ತು. ಒಂದುದಿನ ಆ್ಯಂಡ್ರೂಸ್ ಭಾರತ-ನೇಪಾಳ ಗಡಿಯ ಬಳಿ ಜೀಪ್‌ನಲ್ಲಿ ಹೋಗುತ್ತಿದ್ದರು. ಆಗ ಒಂದು ಚೀಟಾ ಅವರ ಕಣ್ಣಿಗೆ ಬಿತ್ತು. ಅವರು ತಮ್ಮ ಜೀಪ್ ಅನ್ನು ಚೀಟಾ ಓಡುತ್ತಿದ್ದ ದಿಕ್ಕಿಗೆ ತಿರುಗಿಸಿದರು. ಜೀಪ್ ಅನ್ನು ನೋಡಿದಾ ಚೀಟಾ ಮತ್ತಷ್ಟು ಜೋರಾಗಿ ಓಡಲಾರಂಭಿಸಿತು. ಚೀಟಾ ಓಡುವುದರ ವೇಗವನ್ನು ಪರೀಕ್ಷಿಸಲು, ಆ್ಯಂಡ್ರೂಸ್ ನಿರ್ಧರಿಸಿದರು. ಅವರು ಜೀಪ್‌ನ ವೇಗವನ್ನು ತಾಸಿಗೆ 80 ಕಿ.ಮೀ. ನಂತೆ ಹೆಚ್ಚಿಸಿದರು. ಆದರೂ ಜೀಪ್, ಚೀಟಾಗಿಂದ ಹಿಂದಿತ್ತು. ಜೀಪ್‌ನ ವೇಗವನ್ನು ತಾಸಿಗೆ 100ಕಿ.ಮೀ.ಗೆ ಹೆಚ್ಚಿಸಿದಾಗಲೂ ಚೀಟಾವೇ ಮುಂದಿತ್ತು. ಹೀಗೆಯೇ ಓಡುತ್ತಾ ಓಡುತ್ತಾ ಚೀಟಾ ಒಂದು ಪೊದೆಯೊಳಗೆ ನುಗ್ಗಿ, ಕಣ್ಮರೆಯಾಯಿತು.

ನಾಲ್ಕು ಕಾಲುಗಳಿರು ಪ್ರಾಣಿಗಳಲ್ಲಿ, ಅತ್ಯಂತ ವೇಗವಾಗಿ ಓಡಬಲ್ಲ ಪ್ರಾಣಿಯೆಂದರೆ ಚೀಟಾ. ಅದು ತಾಸಿಗೆ 112ಕಿ.ಮೀ. (70ಮೈಲಿಗಳು) ವೇಗದಲ್ಲಿ ಓಡುತ್ತದೆ. ಅದನ್ನು ಬಿಟ್ಟರೆ ಅತ್ಯಂತ ಹೆಚ್ಚು ವೇಗದಲ್ಲಿ ಓಡುವ ಮತ್ತೊಂದು ಪ್ರಾಣಿ, ಒಂದು ಜಾತಿಯ ಕರಿಬಣ್ಣದ ಜಿಂಕೆ. ವೇಗದಲ್ಲಿ ಮೂರನೇ ಸ್ಥಾನ ಪಡೆದಿರುವ ಪ್ರಾಣಿಯೆಂದರೆ ಮಂಗೋಲಿಯಾದ ಗೆಜೆಲ್ (Gezelle) ಮತ್ತು ಪ್ರಾಂಗ್‌ಹಾರ್ನ್ (Pronghorn) ಇವೆರಡೂ ಒಂದು ಬಗೆಯ ಜಿಂಕೆಗಳೇ. ಈ ಜಿಂಕೆಗಳು ತಾಸಿಗೆ 95ಕಿ.ಮೀ.(60ಮೈಲಿಗಳು) ವೇಗದಲ್ಲಿ ಓಡುತ್ತವೆ. ನಾಲ್ಕನೇ ಸ್ಥಾನ ಸಿಂಹಕ್ಕೆ. ಅದು ತಾಸಿಗೆ 88 ಕಿ.ಮೀ.(55ಮೈಲಿ) ಓಡುತ್ತದೆ.

ಜಿಂಕೆ, ಮೊಲ ಮತ್ತು ನರಿ-ಇವು ಸಹ ತಾಸಿಗೆ ಸುಮಾರು 75ಕಿ.ಮೀ. (47ಮೈಲಿಗಳು) ಓಡುವ ಸಾಮರ್ಥ್ಯಹೊಂದಿವೆ. ಕುದುರೆ. ಹೇಸರಗತ್ತೆ ಮತ್ತು ಬೇಟೆನಾಯಿ-ಇವು ತಾಸಿಗೆ 64ಕಿ.ಮೀ. (40ಮೈಲಿಗಳು) ದೂರ ಓಡುತ್ತದೆ. ಕಾಡು ಕೋಣ ತಾಸಿಗೆ 55ಕಿ.ಮೀ. ಓಡಿದರೆ, ಜಿರಾಫೆ ಮತ್ತು ತೋಳ 45ಕಿ.ಮೀ. ವೇಗದಲ್ಲಿ ಓಡಬಲ್ಲವು. ಆನೆಯ ವೇಗ ತಾಸಿಗೆ 35ಕಿ.ಮೀ. ಕಾಂಗರೂ ಮತ್ತು ಕುರಿ 25ಕಿ.ಮೀ. ದೂರ ಓಡುತ್ತವೆ.

ಅನೇಕ ಮಂದಿ ಸಂಶೋಧನಾಕಾರರು ನಡೆಸಿದ ಪರೀಕ್ಷೆಗಳ ಆಧಾರದ ಮೇಲೆ, ನಾಲ್ಕು ಕಾಲುಗಳ ಪ್ರಾಣಿಗಳ ವೇಗವನ್ನು ಕಂಡುಕೊಳ್ಳಲಾಗಿದೆ.

ಈ ಪ್ರಾಣಿಗಳು ಬಹಳ ಹೊತ್ತಿನವರೆಗೆ ಇದೇ ವೇಗದಲ್ಲಿ ಓಡಲಾರವು. ಕೆಲವು ಕಿ.ಮೀ. ದೂರದ ವರೆಗೆ ಮಾತ್ರ ಅವು ಈ ವೇಗದಲ್ಲಿ ಓಡುತ್ತವೆ.

— ಸಂಗಾತಿ ಸಂಗ್ರಹ

---

## ನಿನ್ನ ನೆನ್‌ಪ್ ಕಾಡ್‌ತಾ ಉಟ್ಟು ಅಣ್ಣಾ

**ತಂಗೆ :** ನಿನ್ನ ನೆನ್‌ಪ್ ಕಾಡ್‌ತಾ ಉಟ್ಟು ಅಣ್ಣಾನೀ ಮರ್‌ತ್ ನೋಡದೆ ಇರ್ ಬಡ ನನ್ನ
ವರ್ಷನೆ ಕಳ್‌ದ್ ಹೋತ್ ಪ್ರೀತಿ ಕರುಣೆ ಇಲ್ಲದ ಕಲ್ಲ್ ಹೃದಯನ ನಿಂದ್

**ಅಣ್ಣ :** ನಿನ್ನನ್ನ ಹೆಂಗೆ ಮರಿಯದು ತಂಗೆ ನನ್ನ ನೋವುನ ನುಂಗಿ ಬದ್‌ಕ್‌ತಾ ಒಳೆ
ನಿನ್ನ ಅಣ್ಣ ಅಂತ ಕಟುಕ ಅಲ್ಲವ್ವ ತಪ್ಪು ತಿಳಿಬಡ ನೀನೆ ನನ್ನ ಜೀವ

**ತಂಗೆ :** ನೀನ್ ಅಪ್ಪ ಅಮ್ಮನ ರೂಪಲಿ ನನ್ನ ಸಾಂಕಿದ ನನ್ನ ಮದುವೆ ಮಾಡಿಕೆ
ಆಸ್ತಿ ಮಾರ್‌ದ ಪಪ್ಪ ಅಮ್ಮಂಗೆ ಮಾತ್ ಕೊಟ್ಟಂಗೆ ಮದ್ವೆ ಮಾಡ್‌ದ.

**ಅಣ್ಣ :** ಕಣ್ಣ್‌ಲಿ ಕಣ್ಣ್ ಇಸ್ಸಿ ನಿನ್ನ ಸಾಂಕಿದೆ ಮನ್ಸ್‌ಗೆ ಎಳ್ಳಷ್ಟ್ ಬ್ಯಾನೆಕೊಡದೆ.
ಸುಖವಾಗಿ ಬಾಲ್‌ತೇಳಿ. ನಿನ್ನ ಮುಖ ನೋಡಿಕೆ ಕೂಗ್‌ತಾ ಒಳೆ ವಿಧಿ ಹಿಂಗಾತ್

**ತಂಗೆ :** ಗಂಡನ ದೇವ್ರು ವಂಗೆ ಕಾಂಬಕೆ ಹೇಳ್‌ದ ಅತ್ತೆ ಮನೆ ಬೆಳ್‌ಗಕ್ ತೇಳ್‌ದ
ಅಂತ ಅಣ್ಣಾ ನನ್ನಿಂದ ಯಾಕೆ ದೂರಾದ ಮನೆಗೆ ಬಾ ನೀನಿಲ್ಲದೆ ತಬ್ಬಲಿ ಆದೆ.

**ಅಣ್ಣ :** ಹೇಳ್‌ನೆ ಕೇಳ್ ಪಾಪಿ ನಾನಾದೆ ಬದ್‌ಕ್ ತುಂಬಾ ನೋವು ಕಷ್ಟ ಕಾಡ್‌ತಾ
ಉಟ್ಟು ಹೆಣ್ಣ್ ಮಕ್ಕಸ ನನ್ನ ಬುಟ್ಟ್ ಹೋದ್ರೂ.

**ತಂಗೆ :** ಶ್ರೀರಾಮನಂತವು ನನ್ನ ಗಂಡ ಲವ, ಕುಶನಂತ ನನ್ನ ಮಕ್ಕ
ಪಪ್ಪ ,ಅಮ್ಮನಂಗೆ ನೋಡುವ ಅತ್ತೆ ಮಾಂವ ನಾನ್ ಪುಣ್ಯವಂತೆ

**ಅಣ್ಣ :** ಇಂತ ಸಮಯಲಿ ನಿನ್ನ ನೋಡಿಕೆ ನಾನ್ ಬಂದರೆ ನಿಂಗೆ ಅವಮಾನ
ಕ್ಷಮಿಸ್ಸ್ ಅವ್ವ ನಿನ್ನ ಅಣ್ಣನ ನೀನ್ ಸುಖವಾಗಿ ಬಾಳ್‌ಕು ಅದೇ ನಿನ್ನ ಅಣ್ಣನ ಆಸೆ

---

ಚಿಂತೆಯೇ ಮುಪ್ಪು , ಸಂತೋಷವೇ ಯೌವನ

15ನೇ ಪುಟದಿಂದ

2) ಕಣ್ಣಿನ ತೊಂದರೆ, ಪರೀಕ್ಷೆ

1) ಶ್ರೀ ಕೃಷ್ಣರಾಜೇಂದ್ರ ಆಸ್ಪತ್ರೆ ಮತ್ತು ಶಸ್ತ್ರ ಚಿಕಿತ್ಸೆ
ಸಯ್ಯಾಜಿರಾವ್ ರಸ್ತೆ, ಮೈಸೂರು - 570 001.

2) ರೇಸ್ ಕೋರ್ಸ್ ಕಣ್ಣಿನ ಆಸ್ಪತ್ರೆ
ಸಿದ್ದಾರ್ಥ ಲೇಔಟ್, ಮೈಸೂರು - 570 011.

3) TVS ಸುಜುಕಿ ಲಿ.
ಬ್ಯಾತಹಳ್ಳಿ, ಕಡಕೊಳ ಪೋಸ್ಟ್
ತಿಂಗಳಿಗೊಮ್ಮೆ ಉಚಿತ ಆರೋಗ್ಯ ತಪಾಸಣೆ ಮಾಡಲಾಗುವುದು ಅಗತ್ಯವಿದ್ದರೆ ಶಸ್ತ್ರ ಚಿಕಿತ್ಸೆಯನ್ನು ಉಚಿತವಾಗಿ ಮಾಡಲಾಗುವುದು

3) ಅಂಗವಿಕಲರಿಗೆ

1) ಜೆ.ಎಸ್.ಎಸ್. ಆಸ್ಪತ್ರೆ
ರಾಮಾನುಜ ರಸ್ತೆ, ಮೈಸೂರು - 570 004.

2) ಮಹಾವೀರ ಕ್ಲಿನಿಕ್
ಡೆಫ್ ಅಂಡ್ ಡಂ ಶಾಲೆ ಪಕ್ಕ
ಬಂಬೂಬಜಾರ್, ಸಯ್ಯಾಜಿರಾವ್ ರಸ್ತೆ, ಮೈಸೂರು.

3) ನೇಮಿನಾಥ ಎಂಟರ್ ಪ್ರೈಸಸ್
ಸಂಗಂಟಾಕೀಸ್ ಪಕ್ಕ, ಹಳ್ಳದಕೇರಿ, ಮೈಸೂರು

4) ಹಾವು/ಚೇಳು ಕಡಿತಕ್ಕೆ
ಶ್ರೀ ಶ್ರೀ ಸಿದ್ದಮಲ್ಲಿಕಾರ್ಜುನಸ್ವಾಮಿಗಳು
ಉಚಿತ ಚಿಕಿತ್ಸೆ ಹಸ್ತಿಕೇರಿ ಮಠ, ತಲಕಾಡು. ತಿ. ನರಸೀಪುರ

**ವಿಜ್ಞಾಪನೆ** : ವಿದ್ಯಾವಂತ ನಿರುದ್ಯೋಗಿಗಳು. ಈ ಮಾಹಿತಿ ಪತ್ರದಿಂದ ಪ್ರಯೋಜನ ಪಡೆದ ನಂತರ ತಮ್ಮ ಊರಿನ ಇತರೆ ಸ್ನೇಹಿತರು, ಸಂಬಂಧಿಗಳಿಗೂ ಸಹ ಈ ಬಗ್ಗೆ ಮಾಹಿತಿ ನೀಡಿ, ಸಾಧ್ಯವಾದರೆ ಪುಸ್ತಕದ ಪ್ರತಿ ನೀಡುವ ಮೂಲಕ ಉದ್ದೇಶ ಸಫಲಗೊಳಿಸಿದರೆ ಸಂಗಾತಿಗದೆ ತೃಪ್ತಿ ಮುಗಿಯಿತು. ಸಂಪಾದಕಿ

---

5ನೇ ಪುಟದಿಂದ

ನೀವೇ ಊಹಿಸಿ! ಇದರಿಂದ ಇಡೀ ಜಗತ್ತೇ ಒಂದು ಹಳ್ಳಿಯಂತಾಗಿದೆ. ಕಾರಣ ಜನರ, ಸಂಸ್ಥೆಗಳ, ದೇಶಗಳ ನಡುವೆ ಇದ್ದ ಅಂತರ ಕಡಿಮೆಯಾಗುತ್ತಿದೆ.

ಕಂಪ್ಯೂಟರ್ ಟೆಕ್‌ನಾಲಜಿ ಕೈಗಾರಿಕಾ ಕ್ಷೇತ್ರದ ಮೇಲೂ ಗಮನಾರ್ಹವಾದ ಪ್ರಭಾವವನ್ನು ಬೀರಿದೆ. ನಮ್ಮ ದೇಶದಲ್ಲೇ ಲೆಕ್ಕಕ್ಕೆ ಸಿಗದಷ್ಟು ಕಂಪ್ಯೂಟರ್‌ಗೆ ಸಂಬಂಧ ಪಟ್ಟ (Hardware and Software) ಕೈಗಾರಿಕೆಗಳು ತಲೆಎತ್ತುತ್ತಿವೆ. ಅದರಲ್ಲೂ inforys Technologies Ltd, Wipro, H.C.L. Technologies, ಇತ್ಯಾದಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡಿರುವ ಭಾರತೀಯ ಕಂಪೆನಿಗಳು. ಈ ಎಲ್ಲಾ ಬೆಳವಣಿಗೆಗಳ ನಡುವೆ ಇತರೆ ಕೈಗಾರಿಕೆಗಳೂ ಕಂಪ್ಯೂಟರೀಕರಣ ಗೊಳ್ಳುವುದು ಅನಿವಾರ್ಯವಾಗಿದೆ. ಏಕೆಂದರೆ ಎಲ್ಲಾ ಕೈಗಾರಿಕೆಗಳು ಅಂತರ ರಾಷ್ಟ್ರೀಯ ವ್ಯಾಪಾರ ಸಂಸ್ಥೆಯ (World Trade organisation) ಸ್ಥಾಪನೆ ಹಾಗೂ ಅದರಿಂದ ಉದ್ಭವಿಸಿದ ಹಲವು ಅಂತರರಾಷ್ಟ್ರೀಯ ಒಪ್ಪಂದಗಳಿಂದಾಗಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಸ್ಪರ್ಧೆಯನ್ನು ಎದುರಿಸಬೇಕಾಗಿದೆ.

ಸಮಾಜವು ಬದಲಾಗುವುದು ಸಹಜವಾದ ಪ್ರಕ್ರಿಯೆಯಾಗಿದೆ. ಹಾಗೂ ಸಮಾಜವು ಯಾವ ದಿಕ್ಕಿನಲ್ಲಿ ಬದಲಾವಣೆಯಾಗುತ್ತಿದೆ ಎಂದು ಊಹಿಸುವುದು ಸುಲಭಸಾಧ್ಯವಾದ ವಿಷಯವಲ್ಲ. ಮಾನವನು ಏನೇ ಸೃಷ್ಟಿಸಿದರೂ ಅದು ಅವನ ಅನುಕೂಲಕ್ಕಾಗಿಯೇ ಹೊರತು ಬೇರೊಂದಕ್ಕಲ್ಲ. ಹಾಗೆಯೇ ಈ ಕಂಪ್ಯೂಟರ್ ತಂತ್ರಜ್ಞಾನವು ಎಲ್ಲರಿಗೂ ತಿಳಿದಂತೆ ಹಲವು ರೀತಿಯಿಂದ ಅನುಕೂಲಕರವಾಗಿದೆ. ಆದರೆ ಮಾನವ ಜೀವನದ ಸಾರ ಅಥವ ತತ್ವವನ್ನು ಅದು ತೊಡೆದಿದೆ. (Human life is on the verge of losing its substance). ಮನುಷ್ಯನು ಮೊದಲು ಬದಲಾಗುವನೋ ಅಥವ ಸಮಾಜವು ಮೊದಲು ಬದಲಾಗುವುದೋ, ಆದರೆ ನಮ್ಮ ಜೀವನದಲ್ಲಿ ಯಶಸ್ಸು ಗಳಿಸಬೇಕಾದರೆ ನಾವು ಸಾಮಾಜಿಕ-ಸತ್ಯಸ್ಥಿತಿ(Reality)ಗೆ ಹೊಂದಿಕೊಂಡು ನಡೆಯಬೇಕು.

ಪ್ರದೀಪ್. ಪಿ. ಯಂ., ಎಲ್,ಎಲ್,ಎಂ, (LLM)
ಮಾನಸಗಂಗೋತ್ರಿ, ಮೈಸೂರು.

---

6ನೇ ಪುಟದಿಂದ

ಅವನನ್ನು ಎತ್ತಿ ತನ್ನ ಭುಜದ ಮೇಲೆ ಹಾಕಿಕೊಂಡು, ಕತ್ತಲಿನ ಹಾದಿಯಲ್ಲಿ ನಡೆಯಲಾರಂಭಿಸಿದನು !

ಬೇತಾಳ ತ್ರಿವಿಕ್ರಮನ ಕತೆಯ ದೃಶ್ಯ !

* * *

ರೇವತಿ ಭಯ, ಗಾಬರಿಯಿಂದ ಅಂತಹ ಅಪರಾತ್ರಿಯಲ್ಲಿ ಎಲ್ಲಾ ಕಡೆ ಹುಡುಕಾಡುತ್ತಿದ್ದಾಳೆ.

ಇಲ್ಲ... ಯಾರೂ ಕಾಣುತ್ತಿಲ್ಲ !

ಅವಳು ಆಸ್ಪತ್ರೆಯ ಗೇಟನ್ನು ತೆರೆದುಕೊಂಡು ಬರುವುದರಲ್ಲಿ ಅಲ್ಲಿ ಯಾರೂ ಇರಲಿಲ್ಲ !

ಬೆಳಗಿನ ಜಾವ ಐದು ಗಂಟೆಯ ತನಕ ಅವಳು ಹಲವಾರು ಕಡೆ ತಿರುಗಾಡಿದ್ದಳು.

ಪುನಹ ಆಸ್ಪತ್ರೆಗೆ ಹಿಂತಿರುಗಿದ್ದಳು.

ರೇವತಿಗೆ ಬೆಳಿಗ್ಗೆ ಎಚ್ಚರವಾದಾಗ ಎಂಟು ಗಂಟೆಯಾಗಿತ್ತು. ಅವಳು ಆಕಳಿಸುತ್ತಾ ಎದ್ದು ಕುಳಿತಳು.

ಆಗೊಂದು ಸುದ್ದಿ ಕೇಳಿ ಬಂದಿತು !

ಆಸ್ಪತ್ರೆಯ ನರ್ಸ್‌ಗಳು ಮಾತಾಡುತ್ತಿದ್ದರು

ಸಂಪಿಗೆ ಪುರದ ಹುತ್ತದ ಹತ್ತಿರ ಮತ್ತೊಂದು ಘನ ಘೋರ ದುರಂತ ನಡೆದಿತ್ತು !

ಮತ್ತೊಂದು ನಿಗೂಢ ಸಾವು !

**(ಮುಂದುವರೆಯುತ್ತದೆ)**

---

## ಕವಿತೆ : ನವಿಲು

ಸಾವಿರ ಕಂಗಳ ಗರಿಗಳ ನವಿಲೆ
ನಾನು ಜೊತೆಯಲಿ ಕುಣಿಯಲು ಬರಲೆ?
ಗಿರಿವನ ಕಾನನ ಸುಂದರ ಕಣಿವೆ
ಮುಗಿಲಾರ್ಭಟಿಸಲು ತಕದಿಮಿ ಕುಣಿವೆ.

**ಕೆ. ಎ. ಶಿವಪ್ಪ, ಗಾಳಿಬೀಡು**

---

# ಗೌಡ ಜನಾಂಗಕ್ಕೊಂದು ಮಾರ್ಗದರ್ಶನ

ಪ್ರಾಚೀನಕಾಲದಿಂದಲೂ ಗೌಡಜನರಲ್ಲಿ ನಂಬಿಕೆಯ ಪ್ರಸ್ತಾಪವನ್ನು ಹಿಂದಿನಿಂದಲೂ ಇಂದಿನವರೆಗೆ ಮರ್ಯಾದಸ್ಥರಾಗಿ ಬೆಳೆದು ಬಂದ ದಾರಿಯು ರಮಣೀಯವಾಗಿದೆ. ಹಿಂದಿನ ಕಾಲದಲ್ಲಿ ಗೌಡರೆಂದಲೆ 'ಊರಪಟೇಲ' ಎಂಬ ಅರ್ಥವಿತ್ತು. ಕಾಲಕ್ರಮೇಣ ಅದರ ಭವಿಷ್ಯಕ್ಕೆ ಅನುಗುಣವಾಗಿ ಸಾಧನೆಯ ಪ್ರಗತಿಯ ಮುಂಚೂಣಿಯನ್ನು ಸಾಧಿಸಿದೆ ಎಂದು ಹೇಳಲು ನಮಗೆ ಸಂತೋಷವಾಗುತ್ತಿದೆ.

ಈಗೀಗ ಗೌಡ ಜನರು, ತಮ್ಮ ಮಕ್ಕಳ ಭವಿಷ್ಯದ ಬಗ್ಗೆ, ಕಾಳಜಿ ತೆಗೆದು ಕೊಳ್ಳದಿದ್ದರೆ, ಅವರ ಪಾಲಿಗೆ ಕೊಡಲಿ ಏಟಿನಂತದ್ದಾಗಿರುತ್ತದೆ.ಉದಾ: ಮೊದಲಿನಿಂದಲೂ ಬಂದ ಸಂಪ್ರದಾಯಸ್ಥ ಕುಟುಂಬಗಳು, ತಮ್ಮ ಮಕ್ಕಳ ಭವಿಷ್ಯದ ಬಗ್ಗೆ ಚಿಂತಿಸಲಾರರು. ಕೊಟ್ಟ ಹೆಣ್ಣು ಕುಲದಿಂದ ಹೊರಗೆ' ಎಂಬ ಮಾತು ಬಳಕೆಯಲ್ಲಿತ್ತು. ಅದರಂತೆ ಅವಳಿಗೆ ತಂದೆಯ ಆಸ್ತಿ-ಪಾಸ್ತಿಯಲ್ಲಿ ಹಕ್ಕಿರಲಿಲ್ಲ. ಅದರಿಂದ ಹೆಣ್ಣು ಆರ್ಥಿಕವಾಗಿ ಪರಾವಲಂಬಿಯಾಗಿದ್ದಳು.

ಗೌಡ ಮಹನೀಯರು ಒಗ್ಗಟ್ಟಿನಿಂದ ತಮ್ಮ ಸಂಘ ಸಂಸ್ಥೆಗಳನ್ನು ಕಟ್ಟಿದ್ದಾರೆ. ಅದರಂತೆ, ಶಾಲಾ-ಕಾಲೇಜುಗಳಲ್ಲಿ ತಮ್ಮ ಶಾಲೆಯ ಮಕ್ಕಳನ್ನು ಗುರುತಿಸಿ ಅವರಿಗೆ ಶಿಕ್ಷಣ ಅಥವಾ ಯಾವುದೇ ರಂಗಗಳಲ್ಲಿ ತಾರತಮ್ಯವಿಲ್ಲದೆ ಅವರನ್ನು ಸತ್ಕರಿಸುತ್ತಾರೆ. ಅಂತೂ ತಮ್ಮ ಜನಾಂಗದ ವಿದ್ಯಾರ್ಥಿಗಳ ಏಳಿಗೆಯನ್ನು ತಮ್ಮ ಹಿರಿಯರು ಮೊದಲಿನಿಂದಲೂ ಮುಂದುವರಿಸುತ್ತಾ ಬಂದಿದ್ದಾರೆ. ಅವರಿಗೆ ನಾವೆಲ್ಲರೂ ಚಿರಋಣಿಗಳಾಗಬೇಕು. ನಮ್ಮ ಹಿರಿಯರು ಹಾಕಿಕೊಟ್ಟ ಪಥವನ್ನು ಚಾಚೂ ತಪ್ಪದೆ ಪಾಲಿಸಬೇಕು. ಧೈರ್ಯ, ಸ್ವಾಭಿಮಾನ, ದೃಢ ಮನಸ್ಸಿನಿಂದ ನಾವು ಮುನ್ನುಗ್ಗಬೇಕು. ಯಾವುದೇ ಅಹಿತಕರ ಚಟುವಟಿಕೆಗಳಲ್ಲಿ ತಲೆಹಾಕಬಾರದು. ತಮ್ಮ ಪಾಲಿಗೆ ಬಂದ ಪಂಚಾಮೃತದ ಅವಕಾಶವನ್ನು ತಾವು ಎಂದಿಗೂ ತಪ್ಪಿಸಕೊಳ್ಳಬಾರದು.

ಆಕರ್ಷಣೀಯ ಪ್ರಪಂಚದಲ್ಲಿ ಕೇವಲ ಅನುಕರಣೆ ಮತ್ತು ಇತರ ಜನಾಂಗದವರ ವಿದೇಶೀಯರ ಅನುಕರಣೆಯಾಗಬಾರದು. ತಾವು ತಮ್ಮ ಸ್ವತಃ ಈ ನಿಟ್ಟಿನಲ್ಲಿ ಕಾರ್ಯೋನ್ಮುಖರಾಗಬೇಕು. ಮಹಿಳೆಯು ಸಹ ಇಂತಹ ಸನ್ನಿವೇಶದಲ್ಲಿ ಪಾಲ್ಗೊಳ್ಳಬೇಕು. ಕೇವಲ ನಾಲ್ಕುಗೋಡೆಯ ವಿದ್ಯೆಯಾಗಿರದೆ ಭಾಷೆ ದಾನ, ಧರ್ಮ, ಆಚಾರ -ವಿಚಾರ ಸಂಸ್ಕೃತಿಯಲ್ಲಿ ಪಾಲ್ಗೊಳ್ಳಬೇಕು.

ಗೌಡ ಜನಾಂಗದವರು ಮೊದಲಿನಿಂದಲೂ ಕೃಷಿಕರಾಗಿರುವುದರಿಂದ ಈಗಿನ ಗೌಡ ಪೀಳಿಗೆಯವರು, ತಮ್ಮ ವಿದ್ಯಾಭ್ಯಾಸದ ಅನಂತರ ಕೃಷಿಯಲ್ಲಿ ಆಸಕ್ತರಾಗಬೇಕು. ತಮಗೆ ಎಷ್ಟೇ ಕಷ್ಟ ಬಂದರೂ ಅದನ್ನು ಸಹಿಸುವ ಕಾರ್ಯಪ್ರವೃತ್ತರಾಗಿ ಮುಂದಿನ ಭವಿಷ್ಯವು ಉಜ್ವಲವಾಗಿ ಬೆಳಗುವಂತೆ ಮಾಡುವುದು ಇಂದಿನ ಜನಾಂಗದ ಕರ್ತವ್ಯ. ಕೇವಲ ಪದವಿ ತರಗತಿಗಳನ್ನು ಮುಗಿಸಿ ವೈಟ್ ಕೋಲಾರ್ ಜಾಬ್(white colar job)ಗಳಿಗೆ ಆಸಕ್ತರಾಗಿರುವ ಈ ಯುವಜನಾಂಗವು ಕೇವಲ ಕೆಲವೇ ರೂಪಾಯಿಗಳ ಆಶೇ ಆಮಿಷಕ್ಕೊಳಗಾಗಬಾರದು. ತಮ್ಮಲ್ಲಿದ್ದ ಕೃಷಿ ಭೂಮಿಯಲ್ಲಿ ಚೆನ್ನಾಗಿ ಕೃಷಿಯನ್ನು ಮಾಡಿ ಉತ್ತಮ ಕೃಷಿಕರಾಗಿ ಹೆಸರುಗಳಿಸಬಹುದು. ಯಾವುದೇ ಕೃಷಿಯನ್ನು ಅವಲಂಬಿಸಬಹುದು. 'ಪೆನ್ನುಹಿಡಿಯುವ ಕೈ ಮಣ್ಣು ಹಿಡಿದರೇಗೆ?" ಎಂಬ ಅಹಂಕಾರವನ್ನು ಬಿಟ್ಟುಬಿಡಬೇಕು. ವಿದ್ಯಾರ್ಥಿಯ ಜೀವನದಲ್ಲಿ, ಆತನ ಧೈರ್ಯ, ಬುದ್ಧಿವಂತಿಕೆ, ವಿವೇಕ ಸವಿ, ವಿನಯಗಳಿಗೆ ಒಳಗಾಗಬೇಕು. ಕೇವಲ ವಿದ್ಯಾರ್ಥಿಗಳಲ್ಲಿ ತಾನು ಕಲಿತ ವಿದ್ಯೆ ಬರೀ ಸರಕಾರಿ ವಿದ್ಯೆಯಾಗ ಬಾರದು. ಗೌಡ ವಿದ್ಯಾರ್ಥಿಗಳು ಯಾವ ವಿಷಯಗಳಲ್ಲೂ, ಹಿಂದೆ ಬೀಳಲು ಅವಕಾಶ ಮಾಡಿ ಕೊಡಬಾರದು. ಎಲ್ಲಾ ಜನಾಂಗದವಂತೆ, ಎಲ್ಲರಿಗೂ ಸಮಾನರು ಎಂಬ ಧ್ಯೇಯ ಗುರಿಯನ್ನಿಟ್ಟುಕೊಂಡು ಜೀವನವನ್ನು ಆಶಾದೀಪವಾಗಿ ಬೆಳಗಿಸಬೇಕು.

ಗೌಡಜನಾಂಗದವರು ಪರಿವರ್ತನೆಯ ಗತಿಶೀಲತೆಯಲ್ಲಿ ಅರುಣೋದಯ ಮೂಡಿಸಬೇಕು. ಆರ್ಥಿಕವಾಗಿ ಬದಲಾದ ಸನ್ನಿವೇಶದಲ್ಲಿ ತಮ್ಮ ಸಂಪ್ರದಾಯಿಕ ಚಿಪ್ಪಿನಿಂದ ಹೊರಬಂದು ಜೀವನದ ಎಲ್ಲಾರಂಗಗಳಲ್ಲೂ ಉತ್ಕರ್ಷವನ್ನು ಕಂಡುಕೊಳ್ಳಲು ಆಸ್ಪದವಾಗಬೇಕು. ವಿದ್ಯಾರ್ಥಿಗಳು ಇತರ ವಿದ್ಯಾರ್ಥಿಗಳಿಗಿಂತ ಆರ್ಥಿಕ ದೃಷ್ಟಿಯಲ್ಲಿ, ಹೊರಗಿನ ಸಾಮಾಜಿಕ ದೃಷ್ಟಿಯಲ್ಲಿ ಮೇಲ್ಮಟ್ಟದವರು ಎಂಬ ಹೆಮ್ಮೆಯನ್ನು ಗಳಿಸಲು ಪ್ರಯತ್ನಿಸಿದರೆ, ಗೌಡಬಾಂದವರ ವಿದ್ಯಾರ್ಥಿಗಳಲ್ಲಿ ಒಗ್ಗಟ್ಟಿನ ಚಿಲುಮೆ ಚಿಮ್ಮಿದರೆ ಬರಡು ಭೂಮಿ ನಿಜವಾಗಿ ಹಸನಾಗುವುದರಲ್ಲಿ ಸಂದೇಹವೇ ಇಲ್ಲ.

— ಸಂಧ್ಯಾ, ಪಿಲಿಗುಂಡ, ಪುತ್ತೂರು.

---

ಹೀಗೆಂದರೆ...

- ಸದಾ ಕೊನೆಯ ಬೆಂಚಿನಲ್ಲಿ ಕೂರುವ ವಿದ್ಯಾರ್ಥಿ ಎಂದಾದ ರೊಂದು ದಿನ ಮೊದಲನೆ ಬೆಂಚಿನಲ್ಲಿ ಕುಳಿತಿದ್ದು ಕಂಡರೆ...?
  - ಆ ದಿನ ಹೋಂವರ್ಕ್ ಮಾಡಿದ್ದಾನೆಂದರ್ಥ
- ಅಧ್ಯಾಪಕರು ವಿದ್ಯಾರ್ಥಿಯ ತಂದೆಯ ಹತ್ತಿರ ಬಂದು, "ನಿಮ್ಮ ಹುಡುಗ ಸದಾ ಚೇಷ್ಟೆ ಮಾಡುತ್ತಿರುತ್ತಾನೆ, ಸ್ವಲ್ಪವೂ ಓದುವುದಿಲ್ಲ ಅಂದರೆ ಅವನಿಗೆ ಟ್ಯೂಷನ್ ಬೇಕಿದೆ ನನ್ನನ್ನು ನಾಳೆಯಿಂದ ಪಾಠ ಹೇಳಲು ಕರೆಸಿಕೊಳ್ಳಿ ಎಂದರ್ಥ.
- ಕಚೇರಿಯಿಂದ ಹಿಂತಿರುಗಿದ ಗಂಡ " ಛೆ ಇವತ್ತು ಬಹಳ ಕೆಲಸ, ಸುಸ್ತಾಗಿ ಹೋದೆ...
  ಅಂದರೆ ಈ ದಿನ ಹೆಂಡತಿಯನ್ನು ಹೋಟೆಲ್, ಸಿನಿಮಾಕ್ಕೆ ಕರೆದು ಕೊಂಡು ಹೋಗುವುದಿಲ್ಲ ಎಂದರ್ಥ.

— ಕೂರನ ನೌಧೀಸ್, ಚೇರಂಬಾಣೆ

---

**ಹೋದ ಸಮಯ ಮತ್ತೆ ಸಿಗದು, ಹೋದ ಜೀವ ಮತ್ತೆ ಬಾರದು**

# ಸ್ನಾಯುಗಳು ಹೇಗೆ ಕೆಲಸ ಮಾಡುತ್ತವೆ.

ನಮ್ಮ ದೇಹದಲ್ಲಿ 639 ಸ್ನಾಯುಗಳಿವೆ. ಇವೆಲ್ಲಾ ಎಲುಬುಗಳೊಡನೆ ಸಂಪರ್ಕ ಪಡೆದಿವೆ. ಈ ಸ್ನಾಯುಗಳ ಆಕಾರ ಮತ್ತು ರಚನೆ ವಿಭಿನ್ನ. ಮಧ್ಯಮ ಗಾತ್ರದ ಸ್ನಾಯುವೊಂದರಲ್ಲಿ ಸುಮಾರು ಒಂದು ಕೋಟಿ ಜೀವಕೊಶಗಳಿರುತ್ತವೆ(ಅಂದರೆ Cells) ದೇಹದ ಎಲ್ಲ ಸ್ನಾಯುಗಳೂ ಸೇರಿ ಸುಮಾರು 600 ಕೋಟಿ ಕೋಶಗಳಿರುತ್ತವೆ. ನಮ್ಮ ದೇಹದ ಮಾಂಸಖಂಡ ಸ್ನಾಯುಗಳೇ ಹೊರತು ಬೇರೇನಲ್ಲ.



ಹುಟ್ಟಿದಾಗಿನಿಂದ ಸಾಯುವವರೆಗೆ ಈ ಸ್ನಾಯುಗಳು ನಮ್ಮ ದೇಹದಲ್ಲಿ ತುಂಬ ಉಪಯುಕ್ತವಾಗಿ ಕೆಲಸಮಾಡುತ್ತವೆ. ಅವು ಶಾಖೋತ್ಪತ್ತಿ ಮಾಡಿ, ಆಹಾರ, ಜೀರ್ಣಾಂಗಗಳಲ್ಲಿ ಒಂದೆಡೆಯಿಂದ ಮತ್ತೊಂದೆಡೆಗೆ ಹೋಗಲು ನೆರವಾಗುತ್ತವೆ. ಅವು ಗಾಳಿಯನ್ನು ನಮ್ಮ ಶ್ವಾಸಕೋಶಕ್ಕೆ ಒಯ್ಯುತ್ತವೆ. ಅವಿಲ್ಲದೇ ಮಾತನಾಡಲು, ತಿನ್ನಲು, ಕುಡಿಯಲು ಅಥವಾ ನಡೆಯಲು ನಮಗೆ ಸಾಧ್ಯವಾಗದು. ಅವುಗಳ ಕಾರ್ಯ ನಿಂತರೆ, ನಮ್ಮ ಅಂಗಾಂಗಗಳ ಚಲನ-ವಲನ ನಿಂತೇಹೋಗುತ್ತವೆ. ಹೀಗೆ ಮಾಂಸಖಂಡಗಳು ಅಥವಾ ಸ್ನಾಯುಗಳು ನಮಗೆ ಅತ್ಯಗತ್ಯ.

ನಮ್ಮ ದೇಹದಲ್ಲಿ ಮೂರು ಬಗೆಯ ಸ್ನಾಯುಗಳಿವೆ. ಅವು ಯಾವುವೆಂದರೆ ಐಚ್ಛಿಕ (Voluntary), ಅನೈಚ್ಛಿಕ (Involuntary) ಮತ್ತು ಹೃದಯ ಸಂಬಂಧವಾದ (Cardiac) ಸ್ನಾಯುಗಳು. ಕೈಗಳು, ಕಾಲುಗಳು, ಕುತ್ತಿಗೆ ಮತ್ತು ತಲೆ ಇವೇ ಮುಂತಾದವುಗಳ ಸ್ನಾಯುಗಳು ಐಚ್ಛಿಕ. ಏಕೆಂದರೆ ಇವು ನಮ್ಮ ಇಷ್ಟಪ್ರಕಾರ ಕೆಲಸ ಮಾಡುತ್ತವೆ. ಇವುಗಳಲ್ಲಿ ಹೆಚ್ಚು ಸ್ನಾಯುಗಳು ಎಲುಬುಗಳೊಡನೆ ಸೇರಿಕೊಂಡಿರುತ್ತವೆ. ಆದ್ದರಿಂದ ಕೆಲವು ವೇಳೆ, ಇವನ್ನು ಸ್ಕೆಲಿಟಲ್ ಬೋನ್ಸ್ (Skeletal bones) ಎಂದು ಕರೆಯಲಾಗುವುದು. ಐಚ್ಛಿಕಸ್ನಾಯುಗಳು ಅನೇಕ ತಂತುಗಳಿಂದ ರಚಿತವಾಗಿವೆ. ಅನೈಚ್ಛಿಕ ಸ್ನಾಯುಗಳು ತಮ್ಮಷ್ಟಕ್ಕೆ ತಾವೇ ಕಾರ್ಯನಿರ್ವಹಿಸುತ್ತವೆ. ಅವು ನಮ್ಮ ಇಚ್ಛೆಗೆ ತಕ್ಕಂತೆ ಕೆಲಸ ಮಾಡುವುದಿಲ್ಲ. ಹೊಟ್ಟೆ ಮತ್ತು ಕರುಳಿನ ಸ್ನಾಯುಗಳು ಅನೈಚ್ಛಿಕವಾಗಿ ಕೆಲಸ ಮಾಡುತ್ತವೆ. ಏಕೆಂದರೆ ಆಹಾರದ ಜೀರ್ಣಕ್ರಿಯೆ ತನಗೆ ತಾನೇ ನಡೆದು ಕೊಂಡು ಹೋಗುತ್ತದೆ. ಅದನ್ನು ನಾವು ಹತೋಟಿಯಲ್ಲಿಡಲು ಸಾಧ್ಯವಿಲ್ಲ. ಈ ಸ್ನಾಯುಗಳು ರಕ್ತ ಪರಿಚಲನೆಗೂ ಸಹಾಯ ಮಾಡುತ್ತವೆ. ಹೃದಯಕ್ಕೆ ಸಂಬಂಧಿಸಿದ ಸ್ನಾಯು ಹೃದಯದಲ್ಲಿರುತ್ತದೆ. ಈ ಕೆಲಸ ಸಹ ತನ್ನಷ್ಟಕ್ಕೆ ತಾನೇ ನಡೆಯುತ್ತದೆ. ನಮ್ಮ ದೇಹ ರಚನೆಯಲ್ಲಿದು ಅತ್ಯಂತ ಮುಖ್ಯವಾದದ್ದು. ಈ ಸ್ನಾಯುವಿನ ನೆರವಿನಿಂದ ಹೃದಯ 70 ವರ್ಷಗಳ ಜೀವಿತದಲ್ಲಿ 250 ಕೋಟಿ ಸಲ ಬಡಿದುಕೊಳ್ಳುತ್ತದೆ.

ಸ್ನಾಯುಗಳು ನಮ್ಮ ದೇಹದಲ್ಲಿ ಹೇಗೆ ಕೆಲಸ ಮಾಡುತ್ತವೆ? ಯಾವುದಾದರೊಂದು ಕೆಲಸಕ್ಕಾಗಿ, ನಮ್ಮ ಮಿದುಳು ಸಂದೇಶವನ್ನು ಕಳಿಸಿದಾಗ, ಸ್ನಾಯು ಸಂಕೋಚ ಗೊಳ್ಳುತ್ತದೆ. ಈ ಕ್ರಿಯೆ ನಡೆದಾಗ ಜೀವಕೋಶಗಳಲ್ಲಿರುವ ಪೌಷ್ಠಿಕ ಪದಾರ್ಥಗಳ ರಾಸಾಯನಿಕ ಶಕ್ತಿ, ಯಾಂತ್ರಿಕ ಶಕ್ತಿಯಾಗಿ ಪರಿವರ್ತನೆಗೊಳ್ಳುತ್ತದೆ. ಸೆಕೆಂಡಿನ ಹತ್ತನೇ ಒಂದರಷ್ಟು ಅವಧಿಯಲ್ಲಿ ಸ್ನಾಯು ಸಂಕೋಚನಗೊಳ್ಳುತ್ತದೆ. ಸ್ನಾಯು ತನ್ನ ಸಾಮಾನ್ಯ ಸ್ಥಿತಿಗೆ ಬಂದ ಕೂಡಲೇ ಅದಕ್ಕೆ ಮಿದುಳಿನಿಂದ ಮತ್ತೆ ಸಂದೇಶ ಬರುತ್ತದೆ. ಆಗ ಅದು ಪುನಃ ಸಂಕುಚಿತವಾಗುತ್ತದೆ. ಹೀಗೆ ಸ್ನಾಯುಗಳು ಪದೇ ಪದೇ ಸಂಕೋಚನಗೊಳ್ಳುವುದರಿಂದ ದೇಹ, ನಿರಂತರವಾಗಿ ಕೆಲಸಮಾಡುತ್ತದೆ.

ಸಂಗಾತಿ ಸಂಗ್ರಹ

KA/SK/MYS-88 10-01-96 TCI Kar. 09592

# 20ನೇ ಶತಮಾನದಲ್ಲಿ ಜನಾಂಗದ ವಿದ್ಯಾಭ್ಯಾಸಕ್ಕಾಗಿ ದುಡಿದ ಮಹನೀಯರು

## ಕೊಡಗು ಗೌಡ ವಿದ್ಯಾಸಂಘದ ಅಧ್ಯಕ್ಷರುಗಳು

| | | |
|---|---|---|
| 1. | ದಿ|| ಕುಂಭಗೌಡನ ಕುಶಾಲಪ್ಪನವರು | 1908-1918 |
| 2. | ದಿ|| ತೆಕ್ಕಡೆ ಸುಬ್ಬಯ್ಯನವರು | 1918-1922 |
| 3. | ದಿ|| ಮೂಟೇರ ಅಣ್ಣಯ್ಯನವರು | 1922-1924 |
| 4. | ದಿ|| ಶಿರಕಜೆ ಪೊನ್ನಪ್ಪನವರು | 1924-1925 |
| 5. | ದಿ|| ಚೆರಿಯಮನೆ ಕುಶಾಲಪ್ಪನವರು | 1925-1927 |
| 6. | ದಿ|| ನಿಡ್ಯಮಲೆ ಮುದ್ದಪ್ಪ, ಬಿ.ಎ. ಬಿಎಲ್ | 1927-1928 |
| 7. | ದಿ|| ತೆಕ್ಕಡೆ ಆನಂದಯ್ಯನವರು | 1928-1932 |
| 8. | ದಿ|| ಬಡ್ಡನ ಮುತ್ತಣ್ಣನವರು | 1932-1934 |
| 9. | ದಿ|| ಉಳುವಾರನ ಅಪ್ಪಯ್ಯನವರು | 1934-1936 |
| 10. | ದಿ|| ನಿಡ್ಯಮಲೆ ಸೋಮಣ್ಣ, ಬಿ.ಎ. ಬಿಎಲ್ (M.P) | 1936-1937 |
| I1. | ದಿ|| ತೆಕ್ಕಡೆ ಆನಂದಯ್ಯನವರು | 1937-1939 |
| 12 | ದಿ|| ನಿಡ್ಯಮಲೆ ಮುದ್ದಪ್ಪ, ಬಿ. ಎ. ಬಿಎಲ್ | 1940-1949 |
| 13. | ದಿ|| ಕೋರನ ದೇವಯ್ಯ, ಮಾಜಿ ಶಾಸಕರು | 1949-1956 |
| 14. | ದಿ|| ತೋಟಂಬೈಲು ಮಾದಪ್ಪನವರು | 1956-1958 |
| 15. | ದಿ|| ಚೆರಿಯನಮನೆ ಪೊನ್ನಪ್ಪನವರು | 1958-1961 |
| 16. | ಶ್ರೀ ದಂಬೆಕೋಡಿ ಎ. ಚಿಣ್ಣಪ್ಪ, ಬಿ.ಕಾಂ. ಬಿಎಲ್ | 1961-1964 |
| 17. | ದಿ|| ತೋಟಂಬೈಲು ಚಂಗಪ್ಪ, ಬಿ.ಕಾಂ. ಬಿಎಲ್ | 1964-1968 |
| 18. | ಶ್ರೀ ದಂಬೆಕೋಡಿ ಚಿಣ್ಣಪ್ಪ, ಬಿ.ಕಾಂ. ಬಿಎಲ್, ಮಂತ್ರಿಗಳು (ಕರ್ನಾಟಕ ರಾಜ್ಯ) | 1968-1971 |
| 19. | ದಿ|| ಚೆರಿಯಮನೆ ಪೊನ್ನಪ್ಪನವರು | 1971-1974 |
| 20. | ದಿ|| ಪಾಂಡನ ಡಿ. ಸುಬ್ಬಯ್ಯ, ಮಾಜಿ ಶಾಸಕರು | 1974-1981 |
| 21. | ದಿ|| ಕುದುಪಜೆ ಬಿ. ಕೃಷ್ಣಪ್ಪ, ಎಂ. ಎ. ಬಿಎಲ್ | 1981-1995 |
| 22. | ಶ್ರೀ ಕುಯ್ಯಮುಡಿ ಕೆ. ಪೂರ್ಣಯ್ಯನವರು. | 1995 ರಿಂದ |

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.